ಸಮಾಜ ಶಿಕ್ಷಣ ಪ್ರಸಾರಕ ಗ್ರಂಥ ಮಾಲೆ, ೨೫ ನೆಯ ಪುಷ್ಪ

# "ಕಲಿಯೋದ್ಯಾಕೆ"





( ಸಮಾಜ ಶಿಕ್ಷಣದ ಸಮಸ್ಯಾತ್ಮಕ ವಿವೇಚನೆ )



ಲೇಖಕರು:—

**ಅನಂತರಾವ ಕೆ. ಭೋಸಗೆ, ಸೇಡಬಾಳ.**

( ಜಿ. ಬೆಳಗಾವಿ. )



( ಪ್ರಥಮ ಮುದ್ರಣ ೧೦೦೦ )

[ ಬೆಲೆ: ೦-೬-೦

# ಮುನ್ನುಡಿ.

**'ಕಲಿಯೋದ್ಯಾಕೆ'** ಎಂಬ ಈ ನಾಟಿಕೆಯನ್ನು ಬರೆದು ಕೊಟ್ಟವರು **ಶ್ರೀ. ಭೋಸಗೆ ಅನಂತರಾಯರು.** ಇದೀಗ ಅವರು ಸಮಾಜ ಶಿಕ್ಷಣ ಸಾಹಿತ್ಯ ನಿರ್ಮಾಣ ಕಾರ್ಯದಲ್ಲಿ ತೊಡಗಿರುವರು. ಅವರ ಪ್ರಯತ್ನವು ಸ್ತುತ್ಯವಾಗಿದೆ. ಈ ನಾಟಿಕೆಯಲ್ಲಿ ಉಪಯೋಗಿಸಿದ ಭಾಷೆ ಅಚ್ಚ ಹಳ್ಳಿಗರಾಗಿದೆ. ಸುಶಿಕ್ಷಿತ ಜನರಿಗೆ ಓದಲು ಸ್ವಲ್ಪ ಗಡುಚೆನಿಸಬಹುದು. ಹಳ್ಳಿಯ ಚಿತ್ರವನ್ನು ಹಳ್ಳಿಗರ ಮಾತಿನಲ್ಲಿಯೇ ಹೇಳುವದು ಯೋಗ್ಯ. ಈ ಚಿಕ್ಕ ನಾಟಿಕೆಯನ್ನು ಶಾಲೆಯ ಮಕ್ಕಳು ರಂಗ ಭೂಮಿಯ ಮೇಲೆ ಆಡಿ ತೋರಿಸಿ ಅದು ಪರಿಣಾಮಕಾರಿಯೆಂದು ಗೊತ್ತಾದ ಮೇಲೆ ಅವರು ಅದನ್ನು ಪ್ರಕಟಿಸಲು ಕರ್ನಾಟಕ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿಯವರಿಗೆ ಕೇಳಿಕೊಂಡರು. ಈ ಅವರ ಬೇಡಿಕೆಯನ್ನು ಮನ್ನಿಸಿ ಇಂದಿನ ಶುಭ ದಿನದಂದು ಅದನ್ನು ಪ್ರಸಿದ್ಧಿಸಲು ಸಮಿತಿಯವರಿಗೆ ಸಂತೋಷ. ಹಳ್ಳಿಗಳಲ್ಲಿ ಕೆಲಸ ಮಾಡುವ ಸಮಾಜ ಶಿಕ್ಷಣ ಕಾರ್ಯಕರ್ತರು ಈ ಪುಸ್ತಕವನ್ನು ಓದಿ ಅದರ ಮೂಲ ಉದ್ದೇಶವನ್ನು ಜನರಿಗೆ ತಿಳಿಸಿ ಹೇಳುವರೆಂದು ನಮ್ಮ ಗ್ರಹಿಕೆ. ವರ್ಗಗಳಿಗೆ ಬರುವ ಪ್ರೌಢರು ಈ ಚಿಕ್ಕ ನಾಟಕವನ್ನು ಸ್ವತಃ ಓದಿ, ಪಾತ್ರವಹಿಸಿ, ರಂಗಭೂಮಿಯ ಮೇಲೆ ಯಶಸ್ವಿಯಾಗಿ ಆಡಿ ತೋರಿಸುವರೆಂದು ನಮ್ಮ ಆಶೆ.

ಈ ಪುಸ್ತಕವನ್ನು ಬರೆದು ಕೊಟ್ಟ ಬಗ್ಗೆ ಸಮಿತಿಯವರು **ಶ್ರೀ. ಭೋಸಗೆ** ಅವರಿಗೆ ಉಪಕೃತರಾಗಿರುವರು.

**ಬೆಳಗಾವಿ.**
ಅ. ಭಾ. ಸ. ಶಿ. ದಿನ
ತಾ. ೧-೧೨-೫೬

**ಆರ್. ಕೆ. ಮೆಣಸಿ.**
ಸಮಾಜ ಶಿಕ್ಷಣಾಧಿಕಾರಿಗಳು,
ಬೆಳಗಾವಿ.

# ಮೊದಲು ಮಾತು

ಭಾರತವು ಹಳ್ಳಿಗರ ನಾಡಾಗಿದೆ. ಹಳ್ಳಿಗಳು ಸರ್ವತೋಮುಖವಾಗಿ ಸುಧಾರಿಸದೆ ನಾಡಿನ ಅಭ್ಯುದಯವಾಗಲಾರದು. ದಾರಿದ್ರ್ಯ, ಅಜ್ಞಾನ ನಿರಕ್ಷರತೆಗಳು ಹಳ್ಳಿಗಳನ್ನು ಶೃಂಖಲಾರೂಪವಾಗಿ ಬಂಧಿಸಿವೆ. ಇದನ್ನು ಮನಗಂಡು ನಮ್ಮ ಸರಕಾರದವರು 'ಸಾಕ್ಷರತಾ ಪ್ರಸಾರ' ಕಾರ್ಯವನ್ನು ಭರದಿಂದ ಸಾಗಿಸಿದ್ದಾರೆ.

ಈ ವರೆಗೆ ಪ್ರೌಢ ಸಾಕ್ಷರರಿಗಾಗಿ ಹಲವಾರು ಪುಸ್ತಕಗಳು ಪ್ರಕಟವಾಗಿವೆ; ಪ್ರಕಟವಾಗುತ್ತಲಿವೆ. ಅವುಗಳಿಂದ ಓದು-ಬರೆಹ ಕಲಿತ ಮೇಲೆ ಪ್ರೌಢ ಸಾಕ್ಷರರಿಗೆ ವಿಶೇಷ ಜ್ಞಾನವನ್ನು ಪಡೆಯಲಿಕ್ಕೆ ಅನುಕೂಲವಾಗುವದು. ಆದರೆ ಓದು-ಬರೆಹ ಯಾಕೆ ಕಲಿಯಬೇಕು? ಎನ್ನುವ ಅಶಿಕ್ಷಿತ ಪ್ರೌಢರ ಪ್ರಶ್ನೆಗೆ, ಉತ್ತರ ರೂಪವಾಗಿ ಸಾಕ್ಷರತೆಯ ಅವಶ್ಯಕತೆಗಳನ್ನು ಚಿತ್ರಿಸುವ ಐದು ದೃಶ್ಯಗಳ ಈ "ಕಲಿಯೋದ್ಯಾಕೆ?" ಎಂಬ ಪುಟ್ಟ ನಾಟಿಕೆಯನ್ನು ಸಮಾಜದ ಕೈಯಲ್ಲಿ ಇಡಲು ಯತ್ನಿಸಿದ್ದೇನೆ.

ಇದರಲ್ಲಿ ಬರುವ ಸಂಭಾಷಣೆಯು ಉತ್ತರ ಕರ್ನಾಟಕದ ಹಳ್ಳಿಯ ಜನಸಾಮಾನ್ಯರ ಭಾಷೆಯಾಗಿದೆ. ಸಂವಾದ ನಡೆಯುವ ಸ್ಥಾನ, ಹಳ್ಳಿಯ ಅಶಿಕ್ಷಿತ ವರ್ಗದೊಂದು ಭಾಗದ ಸ್ಥಾನಗಳೊಲ್ಲೊಂದಾಗಿದೆ. ಹಳ್ಳಿಗಾಡಿನ ಭಾಷೆ, ಜನ ಸಾಮಾನ್ಯರ ಸಂಭಾಷಣೆ ರೂಪದ ಶೈಲಿ, ಇದರ ವೈಶಿಷ್ಟ್ಯಗಳಾದದ್ದರಿಂದ ಭಾವನಾಪ್ರಧಾನವಾಗಿ ಓದಿದರೇನೇ ಹೆಚ್ಚು ಅರ್ಥಪೂರ್ಣ, ಹಾಗೂ ಪರಿಣಾಮ ಪೂರ್ಣವಾಗುವದು.

ಇದನ್ನು ನಮ್ಮ ಸೇಡಬಾಳ ಕನ್ನಡ ಗಂಡು ಮಕ್ಕಳ ಸಾಲೆಯ ಶ್ರೀ ಸರಸ್ವತಿಯ ಉತ್ಸವದಲ್ಲಿ ರಂಗ ಭೂಮಿಯ ಮೇಲೆ ತಂದಾಗ ಜನರ ಮೇಲೆ ತುಂಬ ಪರಿಣಾಮ ಮಾಡಿತು. ಈ ಪರಿಣಾಮವೇ ನಮ್ಮನ್ನು ಈ ಕೃತಿಯ ಪ್ರಕಾಶನಕ್ಕೆ ಪ್ರಚೋದಿಸಿತೆಂದರೂ ಅಡ್ಡಿಯಿಲ್ಲ.

ಕರ್ನಾಟಕ ಸಮಾಜ ಶಿಕ್ಷಣ ಅಧಿಕಾರಿಗಳೂ, ಮಾನ್ಯರೂ ಆದ **ಶ್ರೀಮಾನ್ ಆರ್. ಕೆ. ಮೆಣಸಿ,** ಬಿ. ಎ. ಬಿ. ಟಿ. ಅವರು ನನ್ನ ಈ ಕೃತಿಗೆ ಪ್ರಕಾಶನದ ಅವಕಾಶವನ್ನಿತ್ತುದಕ್ಕೆ ಅವರಿಗೆ ನಾನು ಎಂದಿಗೂ ಋಣಿಯಾಗಿದ್ದೇನೆ.

'ಸಮಾಜ ಶಿಕ್ಷಣ ದಿನಾಚರಣೆ'ಯ ಮಂಗಲ ಸಮಯದಲ್ಲಿ ಈ ಕೃತಿ ಪ್ರಕಟವಾಗುತ್ತಿರುವದು ಇನ್ನೂ ಸಂತೋಷದಾಯಕವಾಗಿದೆ.

ಕರ್ನಾಟಕದ ಸುಪ್ರಸಿದ್ಧ ಸಾಹಿತಿಗಳೂ, ನನ್ನ ಆತ್ಮೀಯ ಸಾಹಿತ್ಯ ಗುರುಗಳೂ ಆದ **ಶ್ರೀಮಾನ್ ಮಿರ್ಜಿ ಅಣ್ಣಾರಾಯರು** ಈ ಕೃತಿ ರಚನೆಗೆ ಹಲವು ಬಗೆಯಾಗಿ ಸಲಹೆ ಸೂಚನೆ ಸಹಾಯಗಳನ್ನಿತ್ತು ಉಪಕರಿಸಿದ್ದಾರೆ. ಅವರಿಗೆ ಎಷ್ಟು ಕೃತಜ್ಞತೆಗಳನ್ನರ್ಪಿಸಿದರೂ ತೀರದು.

ಸೇಡಬಾಳ
'ಜವಾಹರ ಜಯಂತಿ'
ದಿ. ೧೪—೧೧—೫೭

ತಮ್ಮ,

**ಅನಂತರಾವ ಕೆ. ಭೋಸಗೆ.**



# ಗುಡಿಯ ಚಾವಡಿಯಲ್ಲಿ

( ಸ್ಥಳಃ—ಬೀರನ ಗುಡಿ. ರಾತ್ರಿ ಸುಮಾರು ೮ ಘಂಟೆಯ ಸಮಯ. ಗರ್ಭಗುಡಿಯಲ್ಲಿ ನಂದಾದೀಪ ಉರಿಯುತ್ತಿದೆ. ಹೊರ ಚಾವಡಿಯಲ್ಲಿ ಹರಟೆ ಜೋರಾಗಿ ನಡೆದಿವೆ. ಮೇಲಿಂದ ಮೇಲೆ ತಂಬಾಕದ ಹೊಗೆ ಹಾರಾಡುತ್ತಿದೆ. ಮಾತು—ಕತೆಗಳಲ್ಲಿ ಚುರುಕುತನ ಹೆಚ್ಚಿದ್ದರೂ ಒಬ್ಬಿಬ್ಬರು ಕಂಬಕ್ಕೆ ತಲೆ ಆನಿಸಿ ಗೊರಕೆ ಹೊಡೆಯುತ್ತಲೇ ಇದ್ದಾರೆ. ಅಷ್ಟರಲ್ಲಿ ಡಂಗುರದ ಸಪ್ಪಳ. ಸಪ್ಪಳ ಬರಬರುತ್ತ ಸ್ಪಷ್ಟವಾಗುವದು. ಎಲ್ಲರೂ ಕಿವಿಕೊಟ್ಟು ಕೇಳುವರು. )

**" ಕೇಳಿರಿ !........ಕೇಳಿರಿ!........ನಾಳೆ ಗಾಂಧಿ ಜಯಂತಿ ಉತ್ಸವದ ದಿವಸ ಬೆಳಿಗ್ಗೆ ಪ್ರಭಾತ ಫೇರಿ ಝೆಂಡಾ ವಂದನೆ ನಡೀತೈತಿ. ಸಂಜೆ ೫ ಗಂಟೆಕ್ಕ ಚಾವಡಿ ಮುಂದ ಸಭಾ ಆಗತೈತಿ, ಅಲ್ಲದೆ " ಸಮಾಜ ಶಿಕ್ಷಣ" ದ ವರ್ಗವು ಸುರುವು ಆಗೋದ ಐತಿ ಎಲ್ಲಾ ಜನರ ಬಂದ ಭಾಗವಹಿಸ ಬೇಕರೆಪ್ೊ.... ಢಂ,.... ಢಂ... ಢ..,"**

( ಇದನ್ನು ಕೇಳುತ್ತಲೆ ಗುಡಿಯೊಳಗಿನ ಜನರೆಲ್ಲರು ತಮ್ಮ ತಮ್ಮ ಮಾತುಗಳನ್ನು ನಿಲ್ಲಿಸಿ ಮೂಲಿ ಮನಿ ಮಲ್ಲೆಶಪ್ಪನೇ ಮುಂದಾಗಿ )

**ಮಲ್ಲೇಶಪ್ಪಃ—ಏ..... ಏ........ಪೂಜಾರಿ ಸಿದ್ದಣ್ಣ ! ಇದೇನಪ್ಪಾ ಭಾಳ ಭಾಳ ಹೇಳಿದಿ ? ಡಂಗರ ಯಾತರದು ?**

ಸಿದ್ದಣ್ಣಃ—ಏನ ಕೇಳಿದಿ ಮಲ್ಲೆಶಿ? .... ಡಂಗ ರಾಸ; ಕಂಚಿಂದೈತಿ ಗೊತ್ತಿಲ್ಲ್ಯಾನ!

ಮಲ್ಲೇಶಪ್ಪಃ—(ನಗುನಗುತ್ತ) ಮುದ್ದೀಸಾರೂ ಸಿದ್ದಣ್ಣಪ್ಪಾ, ನೀ—ಮಾತಿನೊಳಗ ಎಂದಾದರೂ ಕೇಳಿದ್ಯಾ‌ಽಽ ಸೀ! ಡಂಗರ ಕಂಚಿಂದೈತಿಪಾ ಗೊತ್ತೈತಿ. ಆದರ ನೀ ಹೇಳೂಸುದ್ದಿ ಸರಿಯಾಗಿ ತಿಳಿಲಿಲ್ಲಾ ಅಂತ ಮತ್ತೊಮ್ಮೆ ಕೇಳತೇನಿ.

ಸಿದ್ದಣ್ಣಃ—ಸುದ್ದಿ ಏನು? ಸಂತೋಷದ ಸುದ್ದಿ ಐತಿ ವರ್ಷದ್ದು. ಗಾಂದೆಪ್ಪ ಹುಟ್ಟಿದ ದಿವಸ ನಾಳೆ. ನಿಮ್ಮ ನಿಮ್ಮ ಮನೀ-ಮಾರ ಸ್ವಚ್ಛ ಮಾಡಕೊಂಡ, ಎಲ್ಲಾರೂ ಕೂಡಿ ಊರಾ-ಕೇರಿ ಹಸನ ಮಾಡಿರಿ. ಅವ ಹೇಳಿದ ಮಾತ ಪಾಲಸತೇವ ಅಂತ ಪ್ರತಿಜ್ಞಾ ಮಾಡರಿ. ಹೋಳಿ ಮಾಡಿ ಹೊಡೇರಿ; ಸಂಜಿ ಹೊತ್ತ ರಾತ್ರಿ ಸಾಲಿಗಿ ನಡೇರಿ. ಮತ್ತ್ಯಾನ ಹೇಳೋದ ಐತಿ ?

( ಕುರುಬರ ಕಾಮಣ್ಣನಡುವೆಯೇ ಬಾಯಿಹಾಕಿ )

ಕಾಮಣ್ಣಃ—ಇದ್ಯಾನ ಸಿದ್ದಣ್ಣ ! ಅಲ್ಽಽ....ಲ್ಽ ....ಲ್ಽ...ಽ ಭಾರಿ ಲಕ್ಚರನ, ಹೊಡೀಲಿಕ್ಕಿ ಹತ್ತಿ ದೆಲ್ಲಾ, ಮೊದಲ ಏನ ಎರಡ ಮಾತ ಹೇಳಿದಿ, ಅವನ್ನ ವರ್ಷಾ ಹೇಳತಿಽಽ ಗೊತ್ತೈತಿ; ಆದರೆ ಈ ಸಾರೆ ಏನ ಹೊಸಾದ ಹೇಳಲಿಕ್ಕೆ ಹತ್ತೀಯಲ್ಲಾಽ! " ರಾತ್ರಿ ಸಾಲ್ಗಿ ನಡೀರಿ ಅಂತ, ಅದೇನಪಾ ! ಇನ್ನ, ಹುಡು ಗರ್ನ ರಾತ್ರಿ ಕಳ್ಸಬೇಕೇನ ಸಾಲಿಗಿ!

( ಆಗಸರ ಭೀಮುಸಿ ನಡುವೆಯೇ ಮಾತು ಸೇರಿಸಿ )

ಭೀಮುಸಿಃ—ಹಗಲಿ ಹೋಗಲಿಕ್ಕೇನೇ ಹುಡು ಗೋರು ಅಳಕೊಂತ ಕರಕೊಂತ ಹೋಗತಾವ. ಇನ್ನ ರಾತ್ರಿ ಹೋಗಿ ಏನ ಕಲಿತಾವ್ರೋ ಏನೋಽ !

ಮಲ್ಲೇಶಪ್ಪಃ—ಎಂಥಾರಾಜ್ಯ ಬಂತಪ್ಪಾಽ ... ಇದು! ರಾತ್ರೀಽಸಾಲಿ ಹಾಕಸಿ, ಹಗಲೀ ಮಾಸ್ತ ರಗ ಏನ ಮಾಡಲಿಕ್ಕೆ ಹಚ್ಚತಾರೋ ಏನೋಽ !

ಕಾಮಣ್ಣಃ—ಏನಽ ಮಳ್ಳ ಮಂದಿ ನಿವ್ರೂ; ಅಂತೀನಿ! ರಾತ್ರಿ ಸಾಲೀ ಇಟ್ರೆ ನಮಗಽ ಲಕ್ಕಾತು ಬಿಡು. ಹಗಲೀ ನಮ್ಮ ಕೆಲ್ಸಕ್ಕ ಹುಡುಗೋರರೆ ಉಪಯೋಗ ಬಿದ್ದಾವು. ಮೂರುಸಂಜಿ ಒಂದ ತಾಸ ಸಾಲ್ಗಿ ಹೋಗಿ ಬಂದ್ರ ನಡೀತೈತಿ.

ಸಿದ್ದಣ್ಣಃ—ಏಽ....ಏಽ... ಕಾಮಣ್ಣಾ ! ನಡ ವಿನ ಕಾಲ್ಹಾದಿ ತಗೀಬ್ಯಾಡನೀ ! ನಿನ್ನ ಮಗನಽ ನಿನ್ನ ಜೋಡೀ ಕುರೀ ಕಾಯಲಾಕ ಕರಕೊಂಡ ಹೋಗಬೇಕ, ಅಂತೂ ಮಾಡಿ ಏನು ಮತ್ತಽ, ಅದಂ ತೂ ದೂರಽ ಇರಲಿ. ಕುರೀ ದಡ್ಡ್ಯಾಗ ಹಾಕಿ, ನೀನೂ ಹೋಗಲಾಕಬೇಕನ್ನ ಸಾಲಿಗಿ ತಿಳಿತೇನ ?

ಮಲ್ಲೇಶಪ್ಪಃ—( ನಸುನಗುತ್ತ ) ಇದ್ಯಾನ ಕಾಮಣ್ಣಾಽ ! ಮುಸಲತ್ತ ನ್ಯೆಮ್ಯಾಲೇ ಬಂತಲ್ಲಾ ! ಹಗಲೀ ಕುರೀ ಸಾಲ್ಽ; ರಾತ್ರಿ ಬರಿಯೂ ಸಾಲಿ, ಬಲೇ ಬೇಶ್ಯಾತ. ಬಿಡು ಎಂದ.

ಸಿದ್ದಣ್ಣ:—ಮುಂದಿನ್ನ ಮುಂದಕ್ಕ ಹಾಕಿ; ಮರೀ ಆಗ ಬ್ಯಾಡ ಮಲ್ಲಾನೀ. ಕಾಮಣ್ಣ ಒಬ್ಬನs ಯಾಕ, ಎಲ್ಲಾರೂ ಕಲೀಲಿಕ್ಕೇ ಬೇಕಂತ ಇನ್ನ.

ಮಲ್ಲೇಶಪ್ಪ:— ಮೂರಿಪತ್ರಕ್ಕ ಸನೇ ಬಂತ ಸಿದ್ದಣ್ಣ! ಇನ್ನ ಮ್ಯಾಲಿ ಸಾಲಿ-ಸಮುದ, ಕಲತ ಮಾಡೋದ್ಯಾನೈತಿ ?

ಭೀಮಸಿ:—ಹುಟ್ಟಾ ಹಿಡಿದಿದ್ದರ ಇರವಲ್ಲಿ ಯಾಕ; ಈ ವಯಸ್ಸಿನಾಗರೇ ಓಮ್ಮೇ ಪಾಟೇ-ಪೆನ್ಸಿಲಾ, ಕೈಯಾಗ ಹಿಡಿದ ಮೆರಿಯಲಾ ಮಲ್ಲಣ್ಣ!

ಕಾಮಣ್ಣ:—ಕರೇವು ಹೋಗಿ ಬಿಳೇವ ಬಂದು ಇನ್ನ ನಮ್ಮಂಥವರ ಕಲತ ಆಗೋದ್ಯಾನೈತಿ? ಬಿಡೊದ್ಯಾನೈತಿ ಎನಾರೆ ಒಣಾ ಉಸಾಬರಿ ಮಾಡ ಕೋತ ಕೂಡತಾ ರೈತ.

ಮಲ್ಲೇಶಪ್ಪ:—( ಗೆಲುವಿನಂತಾಗಿ ) ಅದ್ಯಾಕ ಸಿದ್ದಣ್ಣs ಬಾಯಿ ಬಂದಾಯ್ತು? ಕಾಮಣ್ಣ ನಿನ ಅಂತಾನ ನೋಡಲ್ಲಾs

ಸಿದ್ದಣ್ಣ:—ಇಲ್ಲಿ ನೋಡು ಮಲ್ಲಣ್ಣ! ಸಾರೋ ಸೂರಣ್ಣ ಅಂದ್ರs; ಯಾವ ರಾಜ್ಯದ ಸುದ್ದೀs ಅಂದ ನಂತ, ಹಾಂಗ ಹೇಳಿದಷ್ಟ ಕೇಳಿ ಡಂಗರ ಹೊಡಿ ಯೋದ ಬಿಟಗೊಟ್ಟು ಉಳಿದ ಉಸಾಬರಿ ನನಗೇನ ಗೊತ್ತು? ನಾನೂ ಒಬ್ಬ ನಿಮ್ಮಂಗ ಹೆಬ್ಬಟ್ಟ ಬಹಾ ದ್ದೂರ; ಅಲ್ಲ; ನಿಮಗೆಲ್ಲ ಸಮಾಧಾನ ಹೇಳೂಹಂಗ

ಉತ್ತರ ಹೇಳೋದು ನನಗ ಹ್ಯಾಂಗ ಆಗಬೇಕು ? ಅಕ್ಕಾ....ಅಲ್ಲಿ ನೋಡ್ರಿ; ಆದಪ್ಪ ಗೌಡ್ರೂ, ಕುಲ ಕರ್ಣಿ ಶಾಮರಾಯ್ರಾ; ರಾಮಣ್ಣ ಮಾಸ್ತರೂ ಬರಲಿಕ್ಕೆ ಹತ್ತಿದ ಹಂಗ ಕಾಣಸ್ತೈತಿ. ಅವರ ಮುಂದ ನಿಮ್ಮ ಪ್ರಶ್ನಾ ಇಡ್ರಿ. ನಿಮಗ ಸಮಾಧಾನ ಆಗೂ ಹಂಗ ಅವರು ಉತ್ತರ ಹೇಳೇ ಹೇಳತಾರ, ನನಗ ಇನ್ನೂ ಊರಾಗ ತಿರಗ್ಯಾಡೋದ ಐತಿ. ಹೋಗಿ ಬರ್ತೇನಿ.

( ಮತ್ತೊಮ್ಮೆ ತನ್ನ ಡಂಗುರದ ಸುದ್ದಿ ಸಾರಿ ಹೋಗುವನು. ಆದಪ್ಪ ಗೌಡರು, ಕುಲಕರ್ಣಿ ಹಾಗೂ ಮಾಸ್ತರರೊಡನೆ ಬರುವರು. )

ಶಾಮರಾವ:— ಜನರು ಇಲ್ಲೇ ಇದ್ದಾರ ನೋಡ್ರಿ ಮಾಸ್ತರ. ಇವರ ಹೆಸರು ನಿಮ್ಮ ನಿರಕ್ಷರಿ ಜನರ ಪಟ್ಟಿಯೊಳಗ ಅದನೋ ಇಲ್ಲೋ ನೋಡ್ರಿ.

ರಾಮಣ್ಣ ಮಾಸ್ತರು:— ನೋಡೋಣಲ್ರಿ ಸ್ವಲ್ಪ ಕೂತೇ ನೋಡೋಣರಿ.

ಮಲ್ಲಣ್ಣ-ಕಾಮಣ್ಣ:— ಬರ್ರಿ ಬರ್ರಿ ಗೌಡರ, ಬರ್ರಿ ಕುಲಕರ್ಣೇರ, ಮಾಸ್ತರ ಮ್ಯಾಲ ಬರ್ರಿ.

( ಎದ್ದು ಸರಿದು ನಿಲ್ಲುವರು. ಕಂಬಳಿ ಹಾಸಿ ಕೂಡುವರು. )

ರಾಮಣ್ಣ:— ಮಲ್ಲೇಶಪ್ಪ, ನಮಗೇನು ಇಷ್ಟು ಸತ್ಕಾರ ಮಾಡಿ ಕರೆಯುವ ಅವಶ್ಯಕತೆ ಇಲ್ಲ. ಈಗ ನಾವು, ನೀವು ಕರೆಯದಿದ್ದರೂ ಬಂದೇ ಬರತೀವಿ.

ಕಾಮಣ್ಣಾಃ— ಹಾಂಗೆಂಗ ಅಂತೀರಿಯಪ್ಪs, ದೊಡ್ಡವರು ಇಲ್ಲೀತನಕ ಬಂದೀರಿ, ಮನಸ್ಸಿ ದೊಡ್ಡದು ಮಾಡಿ ಗಳಿಗೊತ್ತ ಕೂತ ಹೋದ್ರನs, ನಮಗ ಸಮಾಧಾನ ಆಗತೈತಿರಿ.

ಆದಪ್ಪಗೌಡರುಃ— ಕಾಮಣ್ಣs ! ಇಂದ ಒಂದs ದಿವಸ ಅಲ್ಲ,- ಮಾಸ್ತರರು ನಿಮ್ಮ ಹತ್ರ ಬಹಳ ದಿವಸ ಕೂಡಾನರ ಇದ್ದಾರ, ನೀ ಏನೂ ಕಾಳಜಿ ಮಾಡಬೇಡ.

ಮಲ್ಲೇಶಪ್ಪಃ— ಇದೇನ ಗೌಡರ ? ನಿಮ್ಮ ಮಾತಿನ ಒಗಟಿದ ಅರ್ಥನs ಆಗಲಿಲ್ಲ ಅಲ್ಲರಿ !!

ಶ್ಯಾಮಣ್ಣಾಃ— ಒಗಟಿ ಏನದ ಮಲ್ಲೇಶಪ್ಪ ! ಇನ್ನ ರಾತ್ರಿ ಸಾಲಿ ಸುರುವು ಆಗೋದು; ನೀವೆಲ್ಲ ಸಾಲಿಗಿ ಹೋಗಾವ್ರು; ಮಾಸ್ತರ ಕಲಸಾವ್ರು.

ಭೀಮಶಿಃ— ಇದೇ ಈಗ ಪೂಜಾರಿ ಸಿದ್ದಣ್ಣ ಹೇಳಿ ಹ್ವಾದ್ರು, ಸಿದ್ದನs ಆಯಿತಲ್ಲ ಮಲ್ಲೇಶಪ್ಪ !

ಶ್ಯಾಮಣ್ಣಾಃ— ಹೌದ ಸರಿ ಅದ. ನಾಳೆ ಗಾಂಧಿಯವರ ಹುಟ್ಟಿ ಹಬ್ಬ ಆ ಮಹಾತ್ಮನ ಜನ್ಮ ದಿನದಿಂದ ಒಂದಾದರೂ ಒಳ್ಳೇ ಕೆಲ್ಸ ಆರಂಭ ಆಗೋದ ಅವಶ್ಯ ಅದ. ಅದಕ್ಕಾಗಿ ನಾಳೆಯಿಂದ ನಮ್ಮ ಈ ಹಳ್ಳಿಯಲ್ಲಿ 'ಸಮಾಜ ಶಿಕ್ಷಣ' ದ ವರ್ಗ ಆರಂಭ ಆಗೋದ ಅದ. ನೀವೆಲ್ಲರೂ ಅದರ ಲಾಭ ತೆಗೆದ ಕೊಳ್ಳಬೇಕಾಗ್ಯದ.

ಮಲ್ಲೇಶಪ್ಪ:— ಯಾರು ? ನಾವ್ರೆ ! ನಾವು ಇನ್ನ ಕಲ್ಯಾಣ ಅಂದ್ರs ಏನ್ರಿ ಕುಲಕರ್ಣೇರ ! ಮುಪ್ಪಿನ ಮಂದೀದು ಚ್ಯಾಷ್ಟಿ ಮಾಡತಿರೇನ್ರಿ !

ಶ್ಯಾಮಣ್ಣ:— ಹೌದ ಮಲ್ಲೇಶಪ್ಪ ! ಚ್ಯಾಷ್ಟಿ ಅಲ್ಲ; ನಿಜ ಹೇಳತೀನಿ. ನೀನು; ಕಾಮಣ್ಣ, ಭೀಮಶಿ ಉಳಿದ ಇಲ್ಲಿ ಕೂತವರು ಗೊರಕಿ ಹೊಡಿಲಿಕ್ಕೆ ಹತ್ತಿ ದವರು, ಊರೊಳಗ ಇದ್ದವರು, ಅಡವಿಯೊಳಗ ಹೋದವರು, ಈ ಹಳ್ಳಿಯೊಳಗಿನ ಪ್ರತಿಯೊಬ್ಬ ವಯಸ್ಸಾದ ಮನುಷ್ಯs, ಕಲೀಬೇಕಾಗೇದ.

ಮಲ್ಲೇಶಪ್ಪ:— ನಮ್ಮ ಅಂಥವರಿಗೆ ಕಲೀ ಅಂತೇರಿ ಅಂದ್ರ,— ಇದೆಂಥ ಕಲಿಕಾಲ ಬಂತೂ ಅಂತೀನಿ !

ಶ್ಯಾಮಣ್ಣ:— ಅದಕ್ಕs ಕಲೀ ಬೇಕೂsss.... ಅಂತ ಹೇಳೋದು ನಾನು.

ಮಲ್ಲೇಶಪ್ಪ:— ಆ ಮ್ಯಾಲಿ, ನಮ್ಮ ಹೊಲಾ, ಮನಿ. ನೀವs ನೋಡಕೊಂಡ ಬಿಡ್ರಿ; ನಾವು ಸಾಲಿಗಿ ಬರತೀವಿ.

ಕಾಮಣ್ಣ:— ನಾವು ಸಾಲೀ ಕಲಿತು ಶ್ಯಾಣೇರ ಆಗಿ; ಮಾಮಲೇದಾರ ಆಗೂದು ಅಷ್ಟರಾಗs ಅದರಿ.

ಭೀಮಶಿ:— ನಾವು ಸಾಲಿಗಿ ಬರಲಿಕ್ಕೆ ಹತ್ತಿದರ, ಮಕ್ಕಳ-ಮರಿ ಗತಿ ಯೇನ್ರಿ ?

ಆದಪ್ಪ ಗೌಡರುಃ— ಏs !... ಭೀಮುಶಿ! ಸ್ವಲ್ಪ ತಡಿ. ಎಲ್ಲರೂ ಒಮ್ಮೆಲೇ ಹೀಂಗ ಪ್ರಶ್ನ ಮಾಡಲಿಕ್ಕೆ ಹತ್ತಿದರ ಉತ್ತರ ಹೇಳೋದು ಕಷ್ಟ ಆಗತದ. ಅದಕ್ಕ ನೀವು ಒಬ್ಬೊಬ್ಬರು ನಿಮ್ಮ-ನಿಮ್ಮ ಸಂಶಯ ಏನ ಅವ ? ತೊಡಕ ಎಲ್ಲಿ ಅದ ? ಅಂಬೂದನ್ನ, ಮಾಸ್ತರ ಮುಂದ ಹೇಳಿದರ ಅವರು ಸಮಾಧಾನ ಮಾಡೇ ಮಾಡತಾರ ಮತ್ತೇನದ ?

ರಾಮಣ್ಣಃ— ನಿಮ್ಮ ಮಾತುಗಳನ್ನು ಕೇಳಿ ನಮಗೆ ಬಹಳ ಆನಂದ ಆಗತದ; ನಿಮ್ಮ ಮನಸ್ಸಿನಲ್ಲಿ ರುವ ಸಂಶಯಗಳೇನು ? ಕಲಿಯಬೇಕಾದರ ನಿಮಗೆ ಬರುವ ತೊಡಕು ತೊಂದರೆಗಳೇನು ? ಯಾಕೆ ಕಲಿ ಯಬೇಕು ? ಅದರಿಂದ ನಿಮ್ಮ ಹಿತ ಎಷ್ಟರಮಟ್ಟಿಗೆ ಸಾಧಿಸಬಹುದು ? ಅಂಬೂ ಮಾತುಗಳನ್ನ,— ಚರ್ಚ್ಯಾ ಮಾಡಲಿಕ್ಕೇನs, ನಾವಿಲ್ಲಿ ಬಂದದ್ದು; ಆದರ. ನೀವು ಕೇಳೂ ಮೇಲಿನ ಎಲ್ಲ ಪ್ರಶ್ನಗಳ ಉತ್ತರ,— ಈಗ ಹೇಳಲಿಕ್ಕೆ ಸಾಧ್ಯಯಿಲ್ಲ. ನಾಳೆಯಿಂದ ಇದs ಗುಡಿಯೊಳಗ ಎಲ್ಲರೂ ಕೂಡೋಣ. ಒಂದೊಂದ ಸಮಸ್ಯಾನ, ಬಿಡಸಕೊಂತ ಹೋಗೋಣ ಎಲ್ಲರಿಗೂ ಒಪ್ಪಿಗಿ ಅದsನ ?

ಕಾಮಣ್ಣಃ— ಒಪ್ಪಿಗಿ ಇರದs ಏನ್ರಿs ಮಾಸ್ತರ! ಪರತಕ್ಷ ಬೀರಪ್ಪ ಬಂದ ಹೇಳಿದಂಗ ಹೇಳಲಿಕ್ಕೆ ಹತ್ತೀರಿ; ಇಂಥಾ ವ್ಯಾಖ್ಯಾs ನಮಗ ಎಂದಾದರೂ ಸಿಗಾಣರೇ !

ಮಲ್ಲೇಶಪ್ಪ:—ಹೌದ ಅಲ್ಲ. ಖರೇ ಹೇಳಿದಿ ನೋಡ ಕಾಮಣ್ಣ. ನಾಳೆ ಗುಡಿ ಪಸಂದ ಸಿಂಗಾರ ಮಾಡಿ ಬಿಡೋಣ.

ಭೀಮಶಿ:—ವ್ಯಾಳೇಕ್ಕ ಎಲ್ಲಾರೂ ಬಂದs ಬಿಡ್ರಿ. ಬೀರಪ್ಪ ಪೂಜಿ ವ್ಯಾಳೇಕ್ಕ.

ಆದಪ್ಪ ಗೌಡರು:—ಎಲಾ ಇವರ! ಏನ್ರೆಪ್ಪಾ? ಭಾಳ್ ಹುರುಪ ಕಾಣಸ್ತೈತಿ ಅಲ್ಲಾ s! ಇದರಾಗs ಗುಂಗಾಗಿ ನಾಳಿನ ಉತ್ಸವ ಮರತೀರಿ ಮತ್ತ s!

ಮಲ್ಲೇಶಪ್ಪ:—ಎಂಥಾಮಾತರೀ ಗೌಡರ s, ಆ ಮಹಾತಮನ ಮರ್‍ಯಾಣರೀ ಎಂದಾದ್ರೂ; ಅಜ್ಞಾನಿ ಜನಾ ನಾವು ನಾಳಿ ನೀವು ಏನೇನೋ ಹೇಳತೀರಿ,—ಅದನ್ನ ನಾವು ಮಾಡಲಿಕ್ಕೆ ಹೈ—ಗೈ ಮಾಡಿದರ ಕೇಳ್ರಿ. !......

ಆದಪ್ಪ ಗೌಡರು:—ಹೇಳೋದೇನೂ, ನಿಮ್ಮ. ಎಲ್ಲಾರೂ ಕೂಡಿ ಮಾಡಾವರು ಅಲ್ಲಾ; s ಏ, ಕಾಮಣ್ಣ ? ಉತ್ಸವದ ವ್ಯಾಳ್ಯಾಕ್ಕ ನಿನ್ನ ಡೊಳ್ಳದ ಮೇಳ ಬರಲಿಕ್ಕೆಬೇಕ ನೋಡ

ಶ್ಯಾಮಣ್ಣಾ:—ಗೌಡ್ರs, ಭೀಮಶಿಯು ಕರಡೀ ಮಜಲು ಮರತs ಬಿಟ್ರೇನು? ಇವಗ s ಮೊದಲ ಹೇಳ್ರಿ.

ಕಾಮಣ್ಣ, ಭೀಮಪ್ಪ :— ಹೇಳಲಿಕ್ಕೆ ಯಾತಕ್ಕ ಬೇಕ್ರೀಯಪ್ಪಾ ! ಆ ಪುಣ್ಯಾತ್ಮನ ಫೋಟೋದ ಮುಂದ, ನಮದ ಅಷ್ಟಾದರೂ ಸೇವಾ ಆಗಲಲ್ಲರಿ.

ರಾಮಣ್ಣ :— ಇಷ್ಟು ತಿಳಿದವರಿಗೆ ಹೆಚ್ಚಿಗೆ ಹೇಳೋ ಕಾರಣವಿಲ್ಲ. ಒಳ್ಳೇದು ಬರುತ್ತೇವೆ.

( ಗುಡಿಯಲ್ಲಿಯ ಜನರು ಆದರದಿಂದ ಬೀಳ್ಕೊಡ್ತಾ ರಾಮಣ್ಣ ಮಾಸ್ತರರೂ, ಆದಪ್ಪ ಗೌಡರೂ, ಕುಲಕರ್ಣಿ ಶಾಮರಾಯರೂ ತೆರಳುವರು. )

## ಮೊದಲನೆಯ ದೃಶ್ಯ

# ನಿನಗಾಗಿ ಕಲಿ

( ಬೀರಪ್ಪನ ಗುಡಿ. ತಳಿರು ತೋರಣಗಳಿಂದ ಶೃಂಗಾರಗಿದೆ. ಗ್ಯಾಸ ದೀಪದ ಬೆಳಕು ಗುಡಿಯನ್ನು ಬೆಳಗುತ್ತಿದೆ. ಹುಡುಗರಿಂದಲೂ ಪ್ರೇಕ್ಷಕರಿಂದಲೂ ಗುಡಿ ಕಿಕ್ಕಿರಿದು ತುಂಬಿದೆ. ನೆರೆದ ಜನತೆಯಲ್ಲಿ ಉತ್ಸಾಹ, ಉಲ್ಹಾಸಗಳು ಎದ್ದು ಕಾಣುತ್ತಿವೆ. ಗರ್ಭಗುಡಿಯಲ್ಲಿ ಬೀರನ ಪೂಜೆ ನಡೆದಿದೆ. )

ಕಾಮಣ್ಣ :- ( ಹೊರಗಿನ ತನ್ನ ಹುಡುಗರನ್ನು ಉದ್ದೇಶಿಸಿ ) ಏ ಏ ಹುಡುಗೋರ್‍ಯಾ ? ಒಂದ ಕೈ ಡೊಳ್ಳ ಬಡೀರಿ, ಒಳಗ ಪೂಜಿ ನಡದೈತಿ.

ಮಲ್ಲೇಶಪ್ಪ:—ಏs ಏ ಕಾಮಾ ? ನೀ ಹಿಂಗ .... ಬರೇ ಡೊಳ್ಳ ಬಡಸಕೊಂತ ಕೂತಿ ಜಂದ್ರ, ಬೆಳಗಾದೀತ, ಅಕಾ ಅಲ್ಲಿ ನೋಡು ರಾಮಣ್ಣ ಮಾಸ್ತರು ಬರೂಹಂಗ ಕಾಣಸ್ತೈತಿ.

ರಾಮಣ್ಣ ಮಾಸ್ತರರ ಪ್ರವೇಶ, ಎಲ್ಲರೂ ಆದರ ದಿಂದ ಎದ್ದು ನಿಲ್ಲುವರು. ಡೊಳ್ಳು ಬಾರಿಸುವದು ಒಮ್ಮೆಲೇ ನಿಂತು ಹೋಗುವದು. ಕಾಮಣ್ಣ-ಮಲ್ಲೇಶಪ್ಪರು ಮಾಸ್ತರ ರನ್ನು ಸ್ವಾಗತಿಸಿ, ಉಚಿತ ಆಸನದಲ್ಲಿ ಕೂಡ್ರಿಸುವರು. )

ರಾಮಣ್ಣ:— ಕೂಡ್ರಿ ಎಲ್ಲರೂ ಕೂಡ್ರಿ. ಏs ಕಾಮಣ್ಣ ? ನೀ ಡೊಳ್ಳ ಬಡಿಯೂದನ್ನ ಯಾಕೆ ನಿಲ್ಲಿಸಿದಿ ?

ಕಾಮಣ್ಣ:— ಏನ್ರೀ s.... ಯಪ್ಪ ದಿನಾ ಡೊಳ್ಳಿನ ಸಪ್ಪಳಾ ಕೇಳಿ, ಕೇಳಿ ಈ ಓಣಿಯುವರಿಗೆ ಸಾಕಾಗೇತ್ರಿ. ಈಗ ನಿಮ್ಮ ಮಾತ ಕೇಳೋದಕ್ಕನs ಜನs ಕೂಡ್ಯೆತಿರಿ. ನೀವ ಬರೂತನಕ ಪೂಜಿ-ಗೀಜಿ ಅಂತ ಮಾಡಕೊಂತ ಕೂತಿದ್ದಿವಿರಿ.

ಮಲ್ಲೇಶಪ್ಪ:— ಏs ಭೀಮಶೀ ? ಪರಸಾದ ತಗೊಂಡ ಹೊರಗ ಬಾ ಇಲ್ಲಿ, ಮೊದಲು ಕೊಡು ಮಾಸ್ತರರಿಗೆ.

( ಭೀಮಶಿ ರಾಮಣ್ಣ ಮಾಸ್ತರರಿಗೂ ಉಳಿದ ಜನರಿಗೂ ಪ್ರಸಾದ ಹಂಚುವನು. )

ರಾಮಣ್ಣಃ— ಇಂದು ನೀವು ಇಷ್ಟ ಜನರೆಲ್ಲರೂ ಕೂಡಿದ್ದನ್ನ ನೋಡಿ ನನಗ ಬಹಳ ಸಂತೋಷವಾಗ ತದ. ಈ ಹೊತ್ತಿನಿಂದ ನಾವು ಬೀರಪ್ಪನ ಎದುರಿಗೆ ಕೂತು ಕೆಲವೊಂದ ಮಾತಗಳನ್ನ ತಿಳದಕೊಳ್ಳ ಬೇಕಾಗ್ಯದ. ಅದಕ್ಕ, ಈಗ ಮೊದಲು ಒಂದು ದೇವರ ಸ್ತೋತ್ರ ಅನ್ನುವಾ. ( ಕಾಮಣ್ಣನನ್ನು ಉದ್ದೇಶಿಸಿ ) ಏನ ಕಾಮಣ್ಣಾ ? ನೀನs ಒಂದು ಬೀರನ ಪದ ಹೇಳಿ ಬಿಡಲ್ಲ.

ಕಾಮಣ್ಣ— ಅದನ್ನೇನ ಮಾಡತೀರಿ ಬಿಡ್ರಿs ಯಪ್ಪ, ನಿಮ್ಮ ಮುಂದ ನಮ್ಮಂಥ ಹುಂಬರು ಹಾಡು ಹ್ಯಾಂಗ ಹೇಳೋದರಿ ?

ರಾಮಣ್ಣಃ— ಕಾಮಣ್ಣ ! ನಿನ್ನ ಈ ಮಾತನ್ನs ನಾ ಒಪ್ಪಲಾರೆ. ದೇವರ ನಾಮಸ್ಮರಣೆಯೊಂದ ಮೇಲೆ ಯಾರು ಎಂಥ ಭಾಷೆಯಲ್ಲಿ ಹೇಳಿದರೇನು ? ಎಲ್ಲವೂ ಪವಿತ್ರವೇ ಅಲ್ಲ.

ಮಲ್ಲೇಶಪ್ಪಃ— ಏನ ಕಾಮಣ್ಣಾ ? ದೊಡ್ಡವರು ಹೇಳತಾರ ಅಂದ ಮ್ಯಾಲಿ ನೀ ಒಂದು ಹಾಡ ಹೇಳ ಲಿಕ್ಕೇನ ಬೇಕ, ಮಾರಾಯಾ ! ದಿನಾ ಕುಣ ಕುಣದ ಹಾಡೇ ಹಾಡತೀ, ಈಗ ಹಿಂಗs, ಮಾಡತಿಯೇನ ?

ಭೀಮಶಿಃ— ಹಿಮ್ಯಾಳಕs ನಾ ಇರತೇನ ಕಾಮಾ. ನೀಯೇನೂ ಗಾಬಾರಿ ಆಗಬ್ಯಾಡ. ಬೇಶ ಹಂಗ ಬಂದ ಹೊಡದ ಬಿಡ.

( ಕಾಮಣ್ಣ ಕೆಳಗಿನ ಹಾಡು ಹೇಳುವನು. ಒಬ್ಬಿಬ್ಬರು ಹಿಮ್ಮೇಳದಿಂದ ಹಾಡುವರು. )

ಸೆರಗ ಬಡ್ಡಿ ನಮ್ಮ ಗುರುವಿನ ಕರದೇವs ।
ಗುರುವ ನಾಡಿಗಿ ದೊಡ್ಡಾವ್ರೋ ss ।
ಗುರುವ ನಾಡಿಗಿ ದೊಡ್ಡಾವ್ರೋ s ।
ಅರುವಿನ ಮೂಲಾ ಹೇಳಾವ್ರೋ ।
ಅರುವಿನ ಮೂಲಾ ಹೇಳೂ ನಮ್ಮಪ್ಪಗ ॥

ಬೆಳ್ಳೀ ಮಂಚಾ ಹಾಕೆವ್ರೋ s
ಬೆಳ್ಳಿ ಮಂಚೋss ಭಂಗಾರ ಮಂಚೋ ।
ಸಿಂಗಾರದ ಥಳಿ ಮಂಚಾನೋ ॥

ಸಿಂಗಾರಾದ ಥಳಿ ಮಂಚದ ಮ್ಯಾಲಿ!
ಮುತ್ತಿನ ಕಂಬಳಿ ಹಾಸೆವ್ರೋ ।
ಮುತ್ತಿನ ಕಂಬಳಿ ಹಾಸೆವ್ರೋ ।
ಸಣ್ಣ ಮಲ್ಲಿಗಿ ಹರಿವೆವ್ರೋ ।
ಸಣ್ಣ ಮಲ್ಲಿಗಿ ಹರಿವೆವ್ರೋ ।
ದುಂಡ ಮಲ್ಲಿಗಿ ಸುರದೇವ್ರೋ ॥
ಭರತಿಯು ದೀಪಾ ಹಚ್ಚೆವ್ರೋ ।
ಸೇವಾದ ಧೂಪಾ ಹಿಡದೇವ್ರೊ ॥
ಅರವಿನ ಮೂಲದ ಗುರುವಿನ ಪೂಜಿಕಿ ।
ಹರುಷದಿಂದ ನಾವ್ ಹಾಡೇವ್ರೋs ॥

ರಾಮಣ್ಣ:—ಬಹಳ ಸರಿಯಾಗಿ ಹೇಳಿದಿ

ಕಾಮಣ್ಣ ! ಕಬೀರ ದಾಸರು ಹೇಳುವಂತೆ ಗುರುವು ಗೋವಿಂದನಿಗಿಂತಲೂ ಶ್ರೇಷ್ಠವಾಗಿದ್ದಾನೆ. ಇಂಥ ಭಕ್ತಿಯು ಗೀತಗಳಿಂದಲೇ ನಮ್ಮ ಅತ್ಮ ಶುದ್ಧ ವಾಗುವದು. ಸ್ವಚ್ಛವಾಗುವದು. ಅದಕ್ಕಾಗಿಯೇ ಮಹಾತ್ಮರು ಪ್ರತಿಯೊಂದು ಕಾರ್ಯವನ್ನು ಪ್ರಾರ್ಥ ನೆಯಿಂದಲೇ ಆರಂಭಿಸುತ್ತಿದ್ದರು. ಇರಲಿ. ಇನ್ನ ನ್ಯಾಲೆ ಮಲ್ಲೇಶಪ್ಪ ! ಕಾಮಾಣ್ಣಾ, ನೀವೆಲ್ಲರೂ ನಿನ್ನೆ ಯಾವ ಪ್ರಶ್ನೆಗಳನ್ನ ಕೇಳತಿದ್ದಿರಿ ? ಆದರ ಬಗ್ಗೆ ಈಗ ವಿಚಾರ ಮಾಡೋಣ.

ಕಾಮಣ್ಣಃ—ಯಾಕ ಮಲ್ಲೇಶಪ್ಪ ! ಸುಮ್ಮನ ಕೂತಿ ? ನಿನ್ನೆ ಒಳ್ಳೇ ಹಾರಾಡತ್ತಿದ್ದೆಲ್ಲ !....

ಮಲ್ಲೇಶಪ್ಪಃ—ಸುಮ್ಮನ್ಯ ಕೂಡಲಿಕ್ಕೆ ಏನ ? ನಮಂಥ ವಯಸ್ಸಾದವರಿಗೆ ಇನ್ನಮ್ಯಾಲಿ ಕಲಿ ಯೋದ ಯಾತಕ್ಕ ಅದರಿಂದ ಹಿತಾ ಆಗೂದು ಅಷ್ಟರಾಗ, ಅದ ಅಲ್ಲರಿ

ಭೀಮಶಿಃ—ವಯಾ ಇಲ್ಲದ ವಯಾದಾಗ ಯಿದ್ಯಾದ ಉಪಯುಗಿ ಏನ ಐತಿರಿ ?

ಮಲ್ಲೇಶಪ್ಪಃ—ಭೀಮಶಿ ಮಾತ ಖರೇ ಐತಿ ರಿಯುಪ್ಪ ಯಾಕ ಕಲೀ ಬೇಕು ? ಅದರಿಂದ ಯಾರಿಗಿ ಏನ ಲಾಭ ಆಗೋದೈತಿರಿ ?

ರಾಮಣ್ಣಃ—ಮಲ್ಲೇಶಪ್ಪ......ಒಳ್ಳೇ ಪ್ರಶ್ನೇ ಯನ್ನೆ ಮಾಡಿದಿ. ಯಾಕೆ ಕಲಿಯಬೇಕು ? ಯಾರಿ ಗಾಗಿ ಕಲಿಯ ಬೇಕು ? ಎನ್ನುವ ವಿಷಯವನ್ನು ಈಗ ವಿಚಾರ ಮಾಡಿ ನೋಡೋಣ. ಕಲಿಯುವ ದರಿಂದ ನಿನಗೆ—ನಿನ್ನ ಕುಟುಂಬಕ್ಕೆ ನಿನ್ನ ಸಮಾ ಜಕ್ಕೆ....ನಿನ್ನ ನಾಡಿಗೆ ಅಷ್ಟೆ ಏಕೆ ಮಾನವ ಕುಲ ಕ್ಕೇನೇ ಹಿತವಾಗುತ್ತದೆ. ಅಂದ ಮೇಲೆ ನೀವು ಯಾಕೆ ಕಲಿಯ ಬಾರದು ?

ಮಲ್ಲೇಶಪ್ಪಃ—ಮಾಸ್ತರ. ಇವೆಲ್ಲ ಮಾತ ನನಗ ಹೆಂಗ ತಿಳಿಬೇಕ್ರಿಯಪ್ಪ ! ಮೊದಲ, ನನಗ ಏನ ಹಿತಾ ಐತೀ ಅದನ್ನ ಹೇಳ್ರಿ ?

ರಾಮಣ್ಣಃ—ಸರಿಯದ ಮಲ್ಲೇಶಪ್ಪ ಓದು— ಬರೆಹ ಯಾಕೆ ಕಲಿಯ ಬೇಕು ? ಅದರಿಂದ ವೈಯ ಕ್ತಿಕ ಯಾವ ಲಾಭ ಆಗತದ ? ಇದನ್ನು ಮೊದಲ ನೋ ಡೋ ಣ. ಇಲ್ಲಿ ನೋಡು ಮಲ್ಲೇಶಪ್ಪ ಈ ಗುಡಿಯನ್ನು ಯಾಕೆ ಕಟ್ಟೇದ್ದೀರಿ ? ಒಳಗಿರುವ ಮೂರ್ತಿಪೂಜೆ ಯಾಕೆ ಮಾಡುತ್ತೀರಿ ! ನೀವೆಲ್ಲ ಬಿಡು ವೇಳೆಯಲ್ಲಿ ಇಲ್ಲಿಯೇ ಯಾಕೆ ಕೂಡುತ್ತೀರಿ?....ಈ ಪ್ರಶ್ನೆಗಳಿಗೆ ಮೊದಲ ಉತ್ತರ ಕೊಡ್ರಿ

ಮಲ್ಲೇಶಪ್ಪಃ— ಇ ದೇ ನ್ರ ಪ್ಪ ಕೇಳೂದು ದೇವರ—ಧರ್ಮದ ವಿಷಯ. ಹಗಲೀ—ರಾತ್ರಿ

ಸಂಸಾರ ರಾಡಿ ಒಳಗ ಸಿಕ್ಕಗಾಸಿ ಆದವರಿಗೆ ಬಂದ ಅರಗಳಿಗೆರೇ ದೇವರು-ದಿಂಡರು ಅಂಬೂದು ದ್ಯಾರೀ ಯಪ್ಪ !... ಮನುಷ್ಯ ಜನ್ಮದಾಗ ಹುಟ್ಟಿ ಬಂದ ಮ್ಯಾಲಿ ದೈವದ ಅರವ ಇಲ್ಲದಿದ್ದರ ದನಗಳ ಸಮನs......ಅಲ್ಲರಿ....

ರಾಮಣ್ಣಃ—ಮಲ್ಲೇಶಪ್ಪ ನೀ ಹೇಳಿದ್ದು ಅಕ್ಷರಶಃ ನಿಜ ಅದ. ನೀನು ಯಾರು ? ದೇವರೆಂದರೆ ಏನು ? ಧರ್ಮದ ಅರ್ಥವೇನು ? ಮನುಷ್ಯ ತನ್ನ ಜೀವನದೊಳಗ ಕರ್ತವ್ಯ ಕರ್ಮಗಳು ಯಾವವ ? ಅಂಬೂ ಮಾತುಗಳನ್ನ ಸ್ವಲ್ಪಆದರ ತಿಳಿದಕೊಂಡರೇನs ಮೇಲಿನ ನಿನ್ನ ಮಾತು ಸರಿ ಆಗತದ....ಇಲ್ಲದಿದ್ದರ ಬರೇ ಬಾಯಿಂದ ಅಂದ ಉಪಯೋಗ ಏನ ಹೇಳು ?

ಮಲ್ಲೇಶಪ್ಪಃ—ಖರೇ ಐತಿರಿಯಪ್ಪ. ತಿಳಿಕೊಳೋದು ನನ್ನ ಮನಸ್ಸಿನೋಳಗ ಭಾಳ ಐತಿ. ಆದರs—ಇದನ್ನೆಲ್ಲ ನಮ್ಮಂಥ ಅಜ್ಞಾನಿ ಮಂದಿ ಹೇಳವರು ಯಾರು ?

ರಾಮಣ್ಣಃ—ಇಂಥ ವಿಷಯವನ್ನು, ಯಾರೊಬ್ಬರು ಒಂದು ಅರ್ಧ ತಾಸ ಒಂದು ಅರ್ಧ ದಿವಸ ಹೇಳಿದರ ತಿಳೀಬಾರ್ದು ಮಲ್ಲೇಶಪ್ಪ. ಅಲ್ಲದ, ಹೇಳುವವರೇನೂ ಹುಟ್ಟುವ ಮುಂಚೆಯೇ,

ಕಲೀ ಬಂದಿರುವದಿಲ್ಲ. ಜ್ಞಾನದ ಮುಖ್ಯ ಸಾಧನ
ಗಳಲ್ಲಿ ಗ್ರಂಥಗಳು ಒಂದಾಗಿವೆ. ಸ್ವಲ್ಪ ಓದು-
ಬರೆಹ ಬಂದರೆ ಸಾಕು. ದಿನಾಲು ವಿಶ್ರಾಂತಿಗಾಗಿ
ಕೂತ ವೇಳೆಯಲ್ಲಿ, ಸುಲಭವಾಗಿ ತಿಳಿಯುವ
ಪುಸ್ತಕಗಳನ್ನು, ಸ್ವಲ್ಪ—ಸ್ವಲ್ಪ ಓದುತ್ತ ಹೋದರೂ
ಎಷ್ಟೋ ವಿಷಯಗಳ ತಿಳವಳಿಕೆ ಆಗತದ. ಇದ
ಕ್ಕೇನೂ ಬಹಳ ಕಲೀ ಬೇಕಾಗಿಲ್ಲ. ಮೊದಲು ಅಕ್ಷರ
ಜ್ಞಾನವಿದ್ದರೆ ಸಾಕು. ಅದನ್ನ.. ಮುಂದ ಬೆಳಿಸಿ
ಕೊಳ್ಳಲಿಕ್ಕೆ ಬರತದ. ಮುಂದ ಓದಿದ್ದು ತಿಳೀಲಿಕ್ಕೆ
ಹತ್ತದ. ನಾವು ಓದಿ ತಿಳಕೊಂಡ ವಿಷಯದಿಂದನೂ
ನಮ್ಮ ಮನಸ್ಸಿಗೆ ಶಾಂತಿ—ಸಮಾಧಾನ ಸಿಗತದ
ಮಲ್ಲೇಶಪ್ಪ.

ಮಲ್ಲೇಶಪ್ಪಃ—ಹೌದರಿಯಪ್ಪ! ಹಾಳ ಮಾತಿ
ನೊಳಗ ವ್ಯಾಳೆ ಕಳೀತೀವಿ ಏನೂ ತಿಳಿಲಾರದ,
ದನಗಳ ಹಂಗ ಏನೇನೋ ಹರಟಿ ಕೊಚ್ಚುತ ಕೂಡ
ತೀವಿ. ಕಣ್ಣಿದ್ದೂ ಕುರುಡರಾಗಿವಿ. ಬುದ್ದೀ ಮಾತ
ಅಂಬೂವು ಗೊತ್ತಾಗಾಣಿಲ್ಲ. ಸ್ವಲ್ಪಾದರೂ ಓದು
ಕಲಿತಿದ್ದರ ನೀವು ಹೇಳಿದ ಹಂಗ ಬಹಳ ಉಪ
ಯೋಗ ಆಗತ್ತೈತ್ರಿ.

ಕಾಮಣ್ಣಃ—ಓದೋದರಿಂದ ಬರೇ ದೇವರು-
ಧರ್ಮದ ವಿಷಯ ಇಷ್ಟ ತಿಳಿತೈತಿಯೋನ್ರಿ?

ರಾಮಣ್ಣ:—ಮೇಲೆ ಹೇಳಿದ್ದು.......ನಮಗೆ ಸಂಬಂಧಿಸಿದ್ದು, ಒಂದು ಸಂಗತಿ ಯಾಯಿತು. ಕಾಮಣ್ಣ....ಇದಲ್ಲದ, ಮನುಷ್ಯಗ ತನ್ನ ನಡೆ—ನುಡಿ ಹ್ಯಾಗಿರ ಬೇಕು ? ಒಳ್ಳೇ ಆಚಾರ ವಿಚಾರ ಯಾವವು ? ಜೀವನದೊಳಗ ಹ್ಯಾಗೆ ಬದುಕ ಬೇಕು ಹ್ಯಾಗೆ ಬದುಕಿದರೆ ಒಳ್ಳೇದು ? ಅಂಬೂ ಮಾತ ಗಳೆಲ್ಲ ವೈಯುಕ್ತಿಕ ಹಿತಕ್ಕಾಗಿನ್ಸ ಬೇಕಲ್ಲ!....ಒಟ್ಟಿಗೆ ಮನುಷ್ಯನಾಗಿ ಹುಟ್ಟಿದ ಮ್ಯಾಲೆ, ಮನುಷ್ಯ ಅಂದ ಬದಕ ಬೇಕಾದರ, ಕಲೀಲಿಕ್ಕೆ ಬೇಕ ನೋಡಪ್ಪ....

ಮಲ್ಲೇಶಪ್ಪ:— ಖರೇ ಹೇಳಿದಿರಿ ನೋಡ್ರಿ ಮಾಸ್ತರ. ಅದಕ್ಕಂತ ಹೇಳಿ ನಮ್ಮ ಸಾಲೀ ಕಲಿಯುವ ಹುಡುಗ ಮ್ಯಾಲಿಂದ ಮ್ಯಾಲಿ ಅಂತಿರ ತಾನ... “ಕಲಿತವ ಜಾಣ ಕಲೀದವ ಕೋಣ” ಅಂತ ಆ ಮಾತು, ಇಂದ ಬರಾಬರಿ ಆದಂಗ ಆತ ಅಲ್ಲರಿ.

ಭೀಮಂತಿ:—ಮಾಸ್ತರ್ಸ ನೀವು ಹಿಂಗ ಅಂದ ಮ್ಯಾಲಿ....ಬರೇ ನಮ್ಮ ಹಿತದ ಸಲವಾಗಿನ್ಸ, ನಾವು ಕಲೀಬೇಕು ಅಂದಂಗಾತ್ರಿ.

ರಾಮಣ್ಣ:—ಇಂದು ಹೇಳಿದ್ದು ನಿನ್ನ ಹಿತದ ಸಲುವಾಗಿ, ನೀ ಕಲೀಬೇಕೂ, ಅಂತ ಇನ್ನ ಮುಂದ ನೀನು, ಮತ್ತೆ ಯಾಕೆ ಕಲೀಬೆಕೂ, ಅಂಬೂದನ್ನ ನಾಳೆ ನೋಡೋಣಲ್ಲ...

ಮಲ್ಲೇಶಪ್ಪ:—ನಿಮ್ಮ ಮಾತ ಕೇಳಿದ ಮ್ಯಾಲಿ ಖರೇ ಅರವು ಮೂಡಿತು ನೋಡ್ರಿ ಮಾಸ್ತರ. ಇಷ್ಟ ದಿವಸ ಹದ್ದಿನ ಹಂಗ, ಸುಮ್ಮನ ಬದಕಿದಂಗ ಆತು ನೋಡ್ರಿ.

ರಾಮಣ್ಣ:—ಈಗs ಹಂಗ ಹೇಳಬ್ಯಾಡ ಮಲ್ಲೇಶಪ್ಪ. ಮಾಸ್ತರ ಇನ್ನೂ ಏನೇನ ಹೇಳವರ ಇದ್ದಾರೋ, ಏನೋ! ನಾಳೆ ತಪ್ಪಿಸಿ ಮತ್ತ, ಲಗೂನೆ ಬಾ.

( ಎಲ್ಲರೂ ಚದರುವರು. )



## ಎರಡನೇಯ ದೃಶ್ಯ

# ಮನೆಗಾಗಿ ಕಲಿ

( ಮೊದಲಿನ ದಿನದಂತೆಯೇ ಗುಡಿ ಜನರಿಂದ ತುಂಬಿದೆ. ಎಲ್ಲರೂ ರಾಮಣ್ಣ ಮಾಸ್ತರರ ಹಾದಿ ಕಾಯುತ್ತಿದ್ದಾರೆ. ಅಷ್ಟರಲ್ಲಿ ಮಾಸ್ತರರ ಆಗಮನ. ಆವರಡಿಂದ ಎಲ್ಲರೂ ಸ್ವಾಗತಿಸುವರು. )

ರಾಮಣ್ಣ:—ಎಲ್ಲರೂ ಬಂದಿದ್ದೀರಾ? ಮಲ್ಲೇಶಪ್ಪ....ಭೀಮಶಿ ಎಲ್ಲಿ ಕಾಣಿಸುವದಿಲ್ಲವಲ್ಲ!...

ಮಲ್ಲೇಶಪ್ಪ:—ಯಾರು ಭೀಮಶಿರೀ! ಅವನ ಗರೇ ಭಲೇ ಹುಚ್ಚ ಹಿಡದ ಬಿಟ್ಟೇತಿರಿ. ನಿನ್ನಿನ ಹಿಡದು

ಗಂಟ ಬಿದ್ದವರ ಮುಂದ ನೀವ ಹೇಳಿದ್ದನ್ನs
ಹೇಳತಾ ತಿರಗತಿದ್ದ, ನಾ ಬರು ಮುಂದ ಅವನ
ಮನಿಗೆ ಹೋಗಿ ಬಂದಿನರಿ. ಗುಡಿಕಡೇನs ಹೋಗ್ಯಾ
ನಂತ ಹೇಳಿದರು.

ಕಾಮಣ್ಣಃ—ಅಕಾs....ಅಲ್ಲಿ ನೋಡ ಮುಗ್ಲೇ
ಶಪ್ಪ ! ಅವಗೆಲ್ಲಿ ಸಾವ ಐತಿ ? ಬಂದ ಬಿಟ್ಟ ನೋಡ.
ಸಂಗಡ ಕಾಡಯ್ಯ ಸ್ವಾಮಿಗೋಳನ್ನ ಕರಕೊಂಡ ಬರ
ಲಿಕ್ಕೆ ಹತ್ಯಾನ.

( ಭೀಮುಶಿ ಕಾಡಯ್ಯಾನ ಪ್ರವೇಶ )

ರಾಮಣ್ಣಃ—ಯಾಕೆ ಭೀಮಶಿ ? ಮನೀ ಕೆಲ್ಸ
ಲಗೂನೆ ಮುಗಿಲಿಲ್ಲ ಕಾಣಸ್ತದೆ........

ಭೀಮಶಿಃ—ಮನೀಕೆಲ್ಸ ನಮ್ಮ ಹಣೀ ಬರಕ್ಕ
ಹತ್ತಿದ್ದ ಐತೆಲ್ಲರಿ ಅದೆಲ್ಲಿ ನಮ್ಮನ್ನ ಬಿಡತೈತಿರಿ ?
ಬರೂ ಮುಂದ ಮಠದ ನ್ಯಾಲಿಂದ ಬರತ್ತಿದ್ದಿನರಿ;
ಶಿವಭಜನಿ ನಡದಿತ್ತರಿ; ಆಲ್ಲೇ ಕಾಡಯ್ಯ ಸ್ವಾಮೀನೂ
ಇದ್ದ; ಒಂದೆರಡ ಪದ ಕೇಳಿ ಬರಬೇಕಾದರ,
ತುಸು ಹೊತ್ತಾತರಿ.

ರಾಮಣ್ಣಃ—ಏನು ಭೀಮಶೀ ! ಭಜನಿ ಕೇಳಿ
ಬಂದಿಯಾ ? ಬಹಳ ಸಂತೋಷ. ಆನ್ಯಾಲಿ ಈಗ
ನೀಕೇಳಿದ್ದ ಒಂದ ಪದ ಹೇಳಿಬಿಡು. ಆ ನಿನ್ನ ಭಜ
ನಿಯಿಂದನ, ಇಂದ ನಾವು ನಮ್ಮ ವಿಷಯವನ್ನು
ಆರಂಭ ಮಾಡೋಣ.

ಭೀಮುತಿಃ— ನನಗೆಲ್ಲಿ ಬರತೈತಿರಿ, ಭಜನಿ ಗಿಝುನಿ? ಈ ಕಾಡಯ್ಯ ಸ್ವಾಮಿನ ಕೇಳ್ರಿ; ಹರಿ ಭಜನಿ, ಶಿವಭಜನಿ ಯಾವದ ಬೇಕಾದ್ದ ಹಾಡತಾನ. ಒಮ್ಮೆ ತಂಬೂರಿ ಹಿಡದ ಅಂದ್ರ,....ಮೂರುನಾಲ್ಕ ತಾಸ ಒಬ್ಬನss ಅಂತಾನರಿ.

ರಾಮಣ್ಣಾ:— ಯಾವ ಭಜನಿ ಅಂದರೂ, ಒಬ್ಬ ದೇವನ ನಾಮಸ್ಮರಣೆಯಲ್ಲಾ!.... ಇರಲಿ ನೀನು ಸ್ವಾಮಿಗಳ ಮ್ಯಾಲಿ ಹೊರೆ ಹಾಕಿ ಪ್ರೊಳ್ಳ ಉಳದಿ ಯಲ್ಲಾ. ಬಹಳ ಬೆರಕಿಯಪ್ಪ ನೀ...'ಸ್ವಾಮಿಗಳ'! ಭೀಮುತಿ ಅಂದಂಗ ನೀವss ಒಂದ ಪದ ಹೇಳಿ ಬಿಡ್ರಿ.

ಕಾಡಯ್ಯಾ:— ಏ ಭೀಮುತೀ ಸಾಸ್ತ್ರರ ಮುಂದ ಹಂಗ ಸಿಕ್ಕ್ಯಾಪಟ್ಟೆ ಹೇಳಬಾರದು. ಏನೋ ಒಂದೆ-ರಡು ಪದಾ ಬಂದರ, ಅದ್ಯಾನ ದೊಡ್ಡ ಮಾತ ಆಗ ಲಿಲ್ಲ. ಬಲ್ಲವರ ಮುಂದ ಅನ್ನೊದ ಅಂದ್ರ ಭಯ ಬರತೈತಿ.

ರಾಮಣ್ಣಾ:— ಮಾರಾಯಾ ನನ್ನ ಕಡಿಂದ ನಿನ್ನೆ ಡೊಳ್ಳಿನ ಪದ ಹೇಳಿಸಿಕೊಂಡಾರ, ನೀ ಸ್ವಾಮಿ ಆಗಿ ಭಜನಿ ಹೇಳದಿದ್ದರ ಹೆಂಗ ನಡದೀತು? ಹೇಳಪಾ ಗಡನ ಹೇಳು?

ಕಾಡಯ್ಯಾ:—( ಕೆಳಗಿನ ಪದ ಹೇಳುವನು )

ಈ ದೇಹದೊಳು ಏಸು ದಿನಾ ಬಾಡಿಗಿದ್ದೆಣ್ಣಾ।
ತಾಸ ಬಡದಂಗ ತಾಳಿ ಜನ್ಮ, ಹೇಸಿಜನ್ಮಕ ಬೇಸಿ ದಣದಿ
ಬ್ಯಾಸತ್ತ ಮನೀ ಬಿಟ್ಟ ನಡದೆಣ್ಣಾ ॥ಪಲ್ಲ॥

ಮಕ್ಕಳಾರು ಮಂದಿ ನಿನಗಣ್ಣ, ಒಳ್ಳೇ ಸೊಕ್ಕಿನವರು,
ಮಕ್ಕಳೀ ಊರೊಳಗಿದಾರಣ್ಣs ॥ಪಲ್ಲ॥

ಕಣ್ಣ ಯಿಕ್ಕುವರು, ಕದನಗಡಕರು, ದಿಕ್ಕಿಗೊಳು
ಮಿಗಿಲೆನಿಸಿ, ಪಕ್ಕನೇ ಅವರನೇ ಹೊಂದಿ ದುಃಖಕೆ
ಗುರಿಯಾಗುವರಣ್ಣಾ ॥

ಅಷ್ಟು ನೆರೆ–ಹೊರೆ ಬಂಧು-ಬಳಗಣ್ಣಾ...
ಎಲ್ಲಾ ಬಿಟ್ಟ ನಡದಿ, ಉಟ್ಟ ಧೋತರ ಕಳದ
ಒಗೆದಣ್ಣಾs ॥ಪಲ್ಲ॥

ರಾಮಣ್ಣಃ— (ಶಾಂತಚಿತ್ತದಿಂದ) ಎಷ್ಟು ಚೆನ್ನಾಗಿದೆ ಪದ. ಸರಿಯಾಗಿ ಹೇಳಿದಿರಿ ಕಾಡಯ್ಯ ಸ್ವಾಮಿ. ಇದರಲ್ಲಿ ಎಂಥ ಅನುಭವಾಮೃತವಿದೆ ನೋಡಿರಿ !.... ಒಂದೊಂದು ನುಡಿಗಳೂ ಎಷ್ಟು ಅರ್ಥಪೂರ್ಣವಾಗಿವೆ ! ಸರಳ ಮಾತುಗಳಲ್ಲಿಯೇ ಎಂಥ ಸತ್ವ ಅಡಗಿದೆ ನೋಡಿರಿ!... ಇರಲಿ ಭೀಮಶಿ? ನಿನ್ನೆ ಯಾವ ಮಾತುಗಳನ್ನು ಹೇಳಿದ್ದೆ ?

ಭೀಮಶಿಃ— ನಿನ್ನೆ ನೀನೂ ಮನುಷ್ಯನಾಗಿ ಹುಟ್ಟಿದ ಮ್ಯಾಲೆ ಕಲೀಬೇಕು ಅಂತ ಹೇಳಿದಿರಿ. ಕಲಿಯೋದರಿಂದ ಅವನ ರೀತಿ, ನೀತಿ ಸುಧಾರಸತೈತಿ. ನಾಲ್ಕ ಮಂದಿಯೊಳಗ ಹೆಂಗ ನಡಿಯೋದು ಗೊತ್ತಾಗತೈತಿ. ತನ್ನ ದೇಹದ ಸ್ವಚ್ಛತಾ ಯಾಕ ಇಟ್ಟಕೋಬೇಕೂ, ಅಂಬೂದ ತಿಳಿತೈತಿ. ಅಲ್ಲದ ದೇವ— ಧರ್ಮದ ಖರೇ ತಿಳವಳಿಕೆ ಆಗತೈತಿ. ಹೀಂಗs

ಏನೇನೋ ಹೇಳಿದಿರಿ ! ಆದರ, ನನ್ನದ ಒಂದು ಸಂಶಯು ಐತ್ರಿ.

ರಾಮಣ್ಣಃ—ಏನು ? ಇದರ ಬಗ್ಗೆ ಸಂಶಯು ಬಂದದನು ! ಏನಡ್ಡಿಯಿಲ್ಲ. ಕಲಿಯೂದರಿಂದ ಹಿತಾ ಇಲ್ಲಾ ಅಂತ, ಅನಿಸಿದರ ಅದನ್ನೂ ಹೇಳಿ ಬಿಡು.

ಭೀಮಶಿಃ—ಮಾಸ್ತರ್ರೆ ನೀವು ಹೇಳೋದರ ಮ್ಯಾಲಿಂದ ಬರೇ ಸ್ವಂತಕ್ಕ ಹಿತಾ ಆಗತದ ಅಂದಂಗ ಆತು. ಕಲಿಯೋದರಿಂದ ಬರೇ ಸ್ವಂತ ಹಿತಾನು ಸಾಧಿಸಿದರ, ಸಂಸಾರಿಗಿಂತ ಸಂನ್ಯಾಸಿನೇ ಭಾಳ ಹಿತ ಆಗತೈತಿ ಅಂದಂಗ ಆಯಿತ ಅಲ್ಲರಿ.

ರಾಮಣ್ಣಃ—ಸನ್ಯಾಸಿ ಕಲಿದಿದ್ದರೂ ನಡೀತದ ಭೀಮಶಿ.. ಆದರ ಸಂಸಾರಿಗೆ ಇದ್ದಾವ ಮೊದಲ ಕಲೀಬೇಕ ಆಗತದ. ಕಲಿಯುಲಾರದ ಮನುಷ್ಯ ಸಂಸಾರ ಮಾಡೋದಂದ್ರ... ಹುಟ್ಟು ಹೊಡೀಲಿಕ್ಕೆ ಬಾರದ ಅಂಬಿಗ ಡೋಣಿ ನಡಿಸಿದಂಗ ಆಗತದ.

ಮಲ್ಲೇಶಪ್ಪಃ—ಏನಾದರೆ ಹೇಳಬ್ಯಾಡ್ರಿ ಮಾಸ್ತರ!....ಮಳ್ಳಮಂದಿ ಅಂತ ತಿಳದು. ಸಾಲೀ ಕಲೀದವ ಸಂಸಾರ ನಡಸೂದುಲ್ಲ ಅಂತ ಹೇಳಿದಂಗ ಆತು—ನಿಮ್ಮ ಮಾತಿನಮ್ಯಾಲಿಂದ.

ರಾಮಣ್ಣಃ—ಕಲಿಯುದ ಮನುಷ್ಯ ಸಂಸಾರ ನಡಸಿದರೂ, ಸರಿಯಾಗಿ ನಡಿಸಲಾರಂತ ಹೇಳ

ಬಹುದು. ಇದನ್ನ....ಗಟ್ಟಿ ಮಾಡುವಸಲುವಾಗಿ ಒಂದೆರಡು ಪ್ರಶ್ನ ಕೇಳತೀನಿ ಉತ್ತರ ಹೇಳತಿಯಾ ಮಲ್ಲೇಶಪ್ಪ ?

ಮಲ್ಲೇಶಪ್ಪಃ— ಕೇಳ್ರಿ ಅಲ್ಲ. ಆದಕ್ಕೇನದರಿ....

ರಾಮಣ್ಣಃ—ನಿನಗ ಭೂಮಿ ಎಷ್ಟ ಅದ ?

ಮಲ್ಲೇಶಪ್ಪಃ—ಐತಿ ಅಲ್ಲರಿ ೧೦-೧೨ ಎಕರೆ.

ರಾಮಣ್ಣ—ಅಷ್ಟ ಭೂಮಿಗೆ ನಿನಗ, ವರ್ಷಕ್ಕ ಬರೂ ಉತ್ಪನ್ನ ಎಷ್ಟು? ಖರ್ಚ ಎಷ್ಟು ? ವರ್ಷಕ್ಕ ಎಷ್ಟು ತಿಲ್ಕ ಉಳಿತದ ?

ಮಲ್ಲೇಶಪ್ಪಃ—ಎಲ್ಲಿ ತಿಲ್ಕ ಕೇಳತೀರಿ!.... .. ಹುಚ್ಚ ಇದೇರಿ ನೀವು. ಹೊಟ್ಟಿಗಿ-ಮಟ್ಟಿಗಿನ ಲಗ ಚೇಟ ಆಗನಲ್ಲು. ಮತ್ತ ವರ್ಷಕ್ಕ ನೂರು-ಇನ್ನೂರ ಸಾಲ ಇದ್ದದ್ದ ಐತಿ.

ರಾಮಣ್ಣಃ—ಒಳ್ಳೇದ ಮಲ್ಲೇಶಪ್ಪ.......ನಿನ್ನ ಹೊಲದ ಹೊಂದಿಗೆ ಯಾರ ಹೊಲ ಅದ ?

ಮಲ್ಲೇಶಪ್ಪಃ—ರಂಗಪ್ಪ ದೇಸಾಯರ್ದ....
ನೆರಿ ಐತಿ ಅಲ್ರಿ.

ರಾಮಣ್ಣಃ—ಅವರ ಭೂಮಿ ಎಷ್ಟ ಅದ ?

ಮಲ್ಲೇಶಪ್ಪಃ....ಎಷ್ಟ ಎಲ್ಲಿಯುದರೀ!... ಅವ ನದೂ, ನಂದೂ ಎರಡೂ ಪಟ್ಟ ಅಷ್ಟ ಅಲ್ರಿ.

ರಾಮಣ್ಣಃ—ಆ ಮ್ಯಾಲಿ ರಂಗಪ್ಪ ದೇಸಾಯರಿಗೂ ನಿನ್ನಂತೇನs....ಪ್ರತಿ ವರ್ಷ ಸಾಲs ಆಗತಿರಬೇಕಲ್ಲ !

ಮಲ್ಲೇಶಪ್ಪಃ—ಇದ್ಯಾಕ ಕೇಳಾಣರಿ ಮಾಸ್ತರ! ದೇಸಾಯರ ಅಂದ್ರ ಊರಿಗೇ ಮೂಗ ಇದ್ದಾಂಗ ಅವರ ಭೂಮಿ ನನ್ನ ಭೂಮಿ ಕೂಡೇ ಇದ್ದರೂ. ಅವರ ಭೂಮಿ ಬಂಗಾರ ಬೆಳೆಯುವಂಥದು ಐತ್ರಿ. ನನ್ನ ಹೊಲದಾಗ ೪—೬ ಚೀಲ ಜ್ವಾಳ ಬೆಳೀಬೇಕಾದರ ರಗಡ ಆಗತೈತಿರಿ. ಆದರ ಅಲ್ಲೇದಲ್ಲೇ ಆ ಭೂಮ್ಯಾಗ ೪೦ ಚೀಲಕ್ಕಿಂತ ಕಡಿಮೆ ತುಂಬುದುಲ್ಲರಿ. ಅಲ್ಲದ ಹತ್ತಿ, ಭೈಮುಂಗ ಬ್ಯಾರೆ ಇರತೈತಿರಿ.

ರಾಮಣ್ಣಃ— ಮಲ್ಲೇಶಪ್ಪ, ಭೀಮುಶಿ ಎಲ್ಲರೂ ಇತ್ತ ಸ್ವಲ್ಪ ಲಕ್ಷಕೊಟ್ಟು ಕೇಳ್ರಿ. ದೇಸಾಯಿಯರದು ಮಲ್ಲೇಶಪ್ಪನದೂ ಎರಡೂ ಅಷ್ಟಷ್ಟೇ ಕ್ಷೇತ್ರ ಜಮೀನ ಒಂದೇ ತರದ ಭೂಮಿ. ಇಬ್ಬರೂ ಒಕ್ಕಲತನ ಮಾಡುವವರೇ. ಹೀಗಿರುವಾಗ ಒಂದ ಪೊಲದಲ್ಲಿ ಅತಿ ಹೆಚ್ಚು ಬೆಳೆ, ಒಂದು ಹೊಲದಲ್ಲಿ ಅತಿ ಕಡಿಮೆ ಯಾಕೆ ? ಒಬ್ಬರು ಬಡವರು ಇನ್ನೊಬ್ಬರು ಶ್ರೀಮಂತರು. ಇದಕ್ಕೆ ಕಾರಣವೇನು ?

ಮಲ್ಲೇಶಪ್ಪಃ—ನಮ್ಮ ನಸೀಬ ಕಾರಣಲ್ಲರಿ.

ರಾಮಣ್ಣಃ—ಅಲ್ಲ....ಅಲ್ಲ....ನಸೀಬವಲ್ಲ; ನಿರಕ್ಷರಿತನವೇ ಕಾರಣ. ಮಲ್ಲೇಶಪ್ಪ !....ನೀನು ಸ್ವಂತ

ದುಡಿಯಬಹುದು. ಹಗಲೀ ರಾತ್ರಿ, ಒಂದೇ ಸವನೆ ದುಡಿಯಬಹುದು ಆದರ ದೇಸಾಯಿಯರು ಸ್ವಂತದುಡಿಯುದೆ, ಆಳುಗಳಿಂದನ್ಯ, ಎಲ್ಲ ಕೆಲಸ ಮಾಡಿಸತಿರತಾರೆ. ಆದರೂ ದೇಸಾಯಿಯರಿಗೆ ಹೆಚ್ಚು ಪ್ರಾಪ್ತಿ ಆಗುತ್ತದೆ. ಅವರು ನಿನಗಿಂತ ಶ್ರೀಮಂತರು. ಅವರ ಕುಟುಂಬ, ನಿನ್ನ ಕುಟುಂಬಕ್ಕಿಂತ ಸುಖಿಯಾದುದು. ಇದಕ್ಕೆ ಯೋಗ್ಯವಾದ ಕಾರಣವಿದೆ. ಸುಶಿಕ್ಷಿತರಾದ ದೇಸಾಯಿಯರು ಹೊಸ ಪದ್ಧತಿಯಿಂದ ಒಕ್ಕಲತನ ಮಾಡುತ್ತಾರೆ. ತಮ್ಮದು ಎಂಥ ಭೂಮಿ ಇದೆ ? ಅದನ್ನು ಯಾವ ರೀತಿಯಿಂದ ಹದಮಾಡಬೇಕು ? ಅದರಲ್ಲಿ ಯಾವ ಯಾವ ಬೆಳೆಗಳನ್ನು ಬೆಳೆಸಬೇಕು ? ರೋಗಗಳಿಂದ ಬೆಳೆಯನ್ನು ಹೇಗೆ ರಕ್ಷಿಸಬೇಕು ಬಂದ ಧಾನ್ಯವನ್ನು ಹೇಗೆ ಕಾಪಾಡಬೇಕು ? ಯಾವಾಗ ಮಾರಾಟ ಮಾಡಬೇಕು ? ಇವೆಲ್ಲವುಗಳ ವಿಚಾರ, ದೇಸಾಯಿಯರಿಗೆ ಗೊತ್ತ ಇದ್ದಷ್ಟು, ನಿನಗೆ ಇರಲಾರದು. ಅಲ್ಲದ ಈಗಿನ ನಮ್ಮ ಸರಕಾರ, ಒಕ್ಕಲಿಗರಿಗೆ ಹಲವು ರೀತಿಯಿಂದ ನೆರವು ನೀಡಲಿಕ್ಕೆ ಹತ್ಯದ. ಆದರು ಅದರ ಲಾಭ ಮಾಡಿಕೊಳ್ಳುವವರು ದೇಸಾಯರಂಥ ಒಕ್ಕಲಿಗರೇ ಹೊರತು, ನಿಮ್ಮಂಥ ನಿರಕ್ಷರಿಗಳಾದ ಒಕ್ಕಲಿಗರಲ್ಲ.

ರಾಮಣ್ಣ:— ಕೇಳಿದ್ಯಾ, ಮಲ್ಲೇಶಣ್ಣ ! ಮಾಸ್ತರ ಹೇಳೋದನ್ನ ಇದರಾಗ ಏನಾದರೂ ಕಸರ ಐತಿ ಯಾನ ನೋಡು. ಬಂಗಾರದಾಗ ಕಸರ ಇದ್ದೀತು ಇವರ ಮಾತಿನೊಳಗ ಕಸರು ಅಂಬೂದು ಇಲ್ಲ ನೋಡಪ್ಪ.

ಮಲ್ಲೇಶಪ್ಪ:—ಹುಂಬ ಒಕ್ಕಲಿಗ್ಯಾರ ಅಂತ ಹೆಸರು ಬಿದ್ದದ್ದ, ಸುಳ್ಳಲ್ಲ ಕಾಮಣ್ಣ ! ಕಲಿತವರ ಮಾತ ಅಂದ್ರ ಮುತ್ತ ಇದ್ದಂಗ ಅವು. ಕಿಮ್ಮತ್ತ ಮಾಡವರು ಯಾರು ? ಇವರ ಮಾತ ಕೇಳಿದ ಮ್ಯಾಲಿ ನಮ್ಮಂಥವರಿಗೆ ಬಡತನದ ಭೂತ, ಬೆನ್ನ ಬಿಡುವ ದುಲ್ಲ ಅಂದಂಗ ಆತು. ಯಾಕ ! ಭೀಮತೀ ? ಹೆಂಡರ—ಮಕ್ಕಳಿಗೆ ಸುಖಾ ಆಗು ಮಾತ ಕೇಳ ತ್ತಿದ್ದೆಲ್ಲ !....

ರಾಮಣ್ಣ:—ಹೌದು ಈಗ ಹೇಳು ಭೀಮತಿ ಸನ್ಯಾಸಿಗೋಳ ಕಲಿಬೇಕೋ ? ಸಂಸಾರಿಗೋಳ ಕಲಿಬೇಕೋ ?.......

ಭೀಮತಿ:—( ಉಸುರ್ಗರೆದು ) ಖರೇ ಐತಿರಿ ಯಪ್ಪ ! ...ನಿಮ್ಮ ಮುಂದ ಮಾತಾಡುದಕ್ಕ ಬಾಯೇ ಬರವಲ್ಲದು. ನೀವ ಹೇಳೋದನ್ನ ವಿಚಾರ ಮಾಡಿದರ—ನಮ್ಮಂಥ ಅಜ್ಞಾನ ಜನರ ಬಾಳೇವು ಅಂದ್ರ, ಹಿಂಗ ಗಂಟೆ ಹಾಕದ ಹಗ್ಗ ಹೊಸಕೊಂತ ಹೋದಂಗ ನೋಡ್ರಿ.

ರಾಮಣ್ಣ:—ಭೀಮಜೀ ! ಮೇಲೆ ಹೇಳಿದ್ದು, ಜೀವನದಲ್ಲಿಯ ಒಂದು ಸಣ್ಣ ಉದಾಹರಣೆ. ಓದು—ಬರೆಹ ಬಾರದ ಮನುಷ್ಯ ಕುರುಡ ಇದ್ದಂತೆ ಜೀವನದೊಳಗ ಹೆಜ್ಜೆ-ಹೆಜ್ಜೆಗೆ ಪೆಟ್ಟು ತಿಂತಿರತಾನ. ಅಂಥವನ ಮೋಸ ಮಾಡೋದು ಇಂದಿನ ಜಗದ ನೀತಿಯಾಗಿದೆ. ನಿರಕ್ಷರಿ ಮನುಷ್ಯ ತನ್ನ ಜೀವನ ಅಲ್ಲದ, ತನ್ನ ಮುಂದಿನ ಮಕ್ಕಳ ಜೀವನವನ್ನೂ, ತನ್ನ ಕೈಯಿಂದ ಕೆಡಸತ್ತಿರತಾನ. ತನ್ನ ಮನೆತನ ಒಳ್ಳೇ ರೀತಿಯಿಂದ ಬದಕಬೇಕು; ಬೆಳೀಬೇಕು... ಎಂಬೂ ಮಾತನ ಅವನಿಗೆ ಗೊತ್ತಾಗುದುಲ್ಲ. ಅಂದ ಮ್ಯಾಲಿ ಅದರ ಹಿತಾ—ಹಿತಗಳು ತಿಳಿಯು ವದಾದರೂ ಹ್ಯಾಗೆ ಸಾಧ್ಯ ಅದ? ಅಶಿಕ್ಷಿತ ಗಂಡ ಹೆಂಡತಿಯರಿಂದ ತಮ್ಮ ಬಾಳುವೆ ಅಲ್ಲದ; ತಮ್ಮ ಮಕ್ಕಳ ಬಾಳವೆಯೂ ಕೆಟ್ಟ ಹೋಗತದ.

ಮಲ್ಲೇಶಪ್ಪ:—ಮೊದಲಿನ ಎಲ್ಲಾ ಮಾತು ಮನಸ್ಸಿಗೆ ಒಪ್ಪಿಗ್ಯಾದುರಿ ಆದರ...ಕಡೀಕ ಏನೋ ಹೇಳಿದಿರೆಲ್ಲ !..........."ಅಶಿಕ್ಷಿತ ಗಂಡ - ಹೆಂಡರಿಂದ ಮಕ್ಕಳ ಜೀವನಾನೂ ಹಾಳಾಗತದ" ಅಂತಅಂದ್ರ ಏನ್ರಿ ? ಹೆಂಗಸರೂ ಸಾಲಿ ಕಲೀಬೇಕ ಅಂತೀ ರೇನ್ರಿ ?

ಕಾಮಣ್ಣ:—ಆರs ಗಡಗೀ ತೊಳಿಯುವ ಹೆಂಗಸಗ ಸಾಲೀ ಕಲೀಬೇಕು. ಅಂತೀರ್ಯಾ !.... ಇದೇನರಿಯಪ್ಪ !....ಅವರು ಕಲ್ತರ ಗಿಲ್ತರ, ಅಂದ್ರ

ತೀರೇ ಹೋಯ್ತು. ಆವರ ಬರೆಕೋತ ಕೂತರ,....
ಬೀಸುಕಲ್ಲು ಹಿಡಿಯೂದು ನಮ್ಮ ಪಾಲಕ ಬಂದಿತರಿ.
ಅದಕ್ಯಾತಕ ಬೇಕ್ರಿ !.... .......ದೆವ್ವಿನಂತಹ ಜಾತಿಗಿ;
ಸಾಲೀ—ಗೀಲಿ !

ರಾಮಣ್ಣಃ—ಕಾಮಣ್ಣ !.... ನಿನ್ನ ಮಾತು
ಕೇಳಿ ನನಗೆ ಬಹಳ ದುಃಖವಾಗತದೆ. ನೀ ತಿಳಿದು
ಕೊಂಡಿರುವ ಸ್ತ್ರೀ, ದೆವ್ವಲ್ಲ;-ದೇವತೆ. ಗೃಹ-ದೇವತೆ.
ಇದನ್ನ ಮೊದಲು ನೆನಪಿನಲ್ಲಿಡು. ಇನ್ನು ಹೆಂಗಸು
ಯಾಕ ಕಲೀ ಬೇಕು ? ಅಂಬೂದನ್ನು ಇಲ್ಲಿ ಕೇಳು
ಸ್ತ್ರೀ—ಪುರುಷ ಅಂದರೆ ಸಂಸಾರ ರಥದ ಎರಡು
ಗಾಲಿ ಇದ್ದ ಹಾಗೆ, ಯಾವದು ಒಂದುಗಾಲಿ
ಕೊಂಕಿದರೂ ಆ ರಥ ಸಾಗಲಾರದು. ಅಲ್ಲದೆ
ಮನೆ ಒಡೆತನ ಹೆಂಗಸಿನದು. ಅವಳಿಂದಲೇ ಮನೆ
ಬೆಳೆದು ಬೆಳಗ ಬೇಕಾದದ್ದು. ಹೀಗಿರಲಿಕ್ಕಾಗಿ ಮನೆ
ಒಡತಿ ಮೂಢಳಿರಬೇಕಂತೀರಾ ? ಸ್ತ್ರೀ ಮನೆಯ
ಮುತ್ತೈದೆಯಾಗಿ, ತಾಯಾಗಿ, ಮನೆಗೂ ನಾಡಿಗೂ
ಕೀರ್ತಿ ತರುವಾಕೆ. ಇಂಥವಳು ಅಜ್ಞಾನಿಯಿರ
ಬೇಕು ಅಂತೀರ್‍ಯಾ !

ಮಲ್ಲೇಶಪ್ಪಃ—ಮಾಸ್ತರರ ನಿಮ್ಮ ಒಂದೊಂದು
ಮಾತ ಕೇಳಿದಂಗ ನಮ್ಮ ತಲೀ ಒಳಗ ಬೆಳಕ ಬಿದ್ದಂಗ

ಆಗಲಿಕ್ಕೆ ಹತ್ಯದರಿ. ಇಷ್ಟ ದಿನದ ನಮ್ಮ ಸಂಸಾರ ನಾಯಿ ಹಂದಿ ಸಂಸಾರಕ್ಕ....ಸರಿ ಆತರಿ.

ಕಾಮಣ್ಣಾ:—ಯಪ್ಪಾ..........ನೀವ ಈಗ ಹೇಳೋದೆಲ್ಲ ಕೇಳಿದ ಮ್ಯಾಲಿ ನಮಗ ಬ್ಯಾರೇನ, ಅನಸಲಿಕ್ಕೆ ಹತ್ಯದರಿ, ಬೀರಪ್ಪನು ನಿಮ್ಮ ಮಾತಿನಿಂದ ನುಡಿಲಿಕ್ಕ ಹತ್ಯಾನ, ಏನೋ ಅಂತ ಭಾಸ ಆಗ ಲಿಕ್ಕೆ ಹತ್ಯದರಿ.

ಭೀಮತಿ:—ಹಂಗ ಹೇಳತಾರ ಅಂತ ತಿಳದು.... ಗುಡಿತುಂಬ ಜನ ಗೊಂಬಿ ಹಂಗ ಕೇಳಕೊಂತ ಕೂತೈತಲ್ಲ !.

ರಾಮಣ್ಣಾ:—ನಾನೇನೂ ಅಷ್ಟ ಬಲ್ಲವನಲ್ಲ. ಭೀಮತಿ-ನೀವೆಲ್ಲ ನನ್ನ ಮ್ಯಾಲಿನ ವಿಶ್ವಾಸದಿಂದ, ಇಷ್ಟ ಹೊತ್ತಿನ ತನಕ ಕೂತ್ರಿ, ನಾನು ನನಗೆ ತಿಳಿದ ಎರಡು ಮಾತು ಹೇಳಿದೆ. ಮತ್ತೆ ನಾಳೆ ಬರುತ್ತೇನೆ. ನಮಸ್ಕಾರ

( ಮಾಸ್ತರರಿಗೂ, ಎಲ್ಲರೂ ಪ್ರತಿ ನಮಸ್ಕಾರ ಸಲ್ಲಿಸುವರು. )

# ಮೂರನೆಯ ದೃಶ್ಯ

# ಸಮಾಜಕ್ಕಾಗಿ ಕಲಿ

( ಗುಡಿಯಲ್ಲಿ ಹಿಂದಿನ ದಿನಕ್ಕಿಂತಲೂ ಸ್ತ್ರೀಯರು ಹೆಚ್ಚು ನೆರೆದಿದ್ದಾರೆ, ರಾಮಣ್ಣ ಮಾಸ್ತರರೂ ಬಂದಿದ್ದಾರೆ. ನಡೆದಿದೆ ಮಾತು-ಕತೆ. )

ಭೀಮತಿ:— ಏ . ....ಕಾಮಣ್ಣ ! ಯಾವಾಗ ಬಂದೀದಿಪಾ!... ಮೂರು ಸಂಜೀನ್ಯ ಬಂದ ತಳ ಊರಿದಿಯಲ್ಲ....ಅವನೀಕಡೇ ಹೋಗಿದ್ದ್ಯೋ ? ಇಲ್ಲೋ. ನಿನಗಂತೂ ಮಾಸ್ತರ ಮಾತು ಮನಸ್ಸಿನೊಳಗ ಭಾಳ ನಾಟಿದಂಗ ಕಾಣಸ್ತೈತಿ...

ಕಾಮಣ್ಣ:— ಭೀಮತೀ! ನೋಡ ಇಲ್ಲಿ. ಮಂದಿ ಮಕ್ಕಳಲೇ ಗುಡಿ ತುಂಬಿ ಹೋಗೇತಿ. ದಿನ ದಿನಕ ಹೊಸಾ ಮಂದಿ ಬರಲಿಕ್ಕೆ ಹತ್ತ್ಯಾರ. ( ಸ್ವಲ್ಪ ಅತ್ತ— ಇತ್ತ ನೋಡಿ ) ಏ ಲಾ....ಇವನ ! ಯಾರಪಾ?... ಯಾರ?....ಆಟದ ರಂಗಣ್ಣ ಏನ ?....ನಿನಗ ಯಾವ ಕಡೆ ಸವಡ ಆತಪ್ಪಾ! ಇತ್ತ ?...ಆಟಾ ನೋಟಾ ಅಂತ ಇರು ಮನಷ್ಯಾ ನೀ. ಇತ್ಲಾಗ ಬಂದೀದಿ?....

ರಂಗಣ್ಣ:— ಏನೋ.......ಮನಿ ಕಟ್ಟಿ ಮ್ಯಾಲಿ ಕೂತಿದ್ದಿನಿ ಕಾಮಣ್ಣಾ, ಜನಾ ಎಲ್ಲಾ ಹೊರಟಿತ್ತು... ಗುಂಪಾಗಿ ಎಲ್ಲಿಗಿ ಹೊರಟಿರಿಪ್ಪಾ ? ಅಂತ ಕೇಳಿದೆ.

ಗುಡಿಯೊಳಗ ಮಾಸ್ತರು ಪುರಾಣ ಹೇಳತಾರು ಅಂತ ಹೇಳಿದ್ರು. ಎಂಥ ಪುರಾಣ ಅಂಬೂದನ್ನ ಕೇಳೋ ಮನಸ್ಸಾತು, ಬಂದ ಬಿಟ್ಟೆನಪಾ !...

ರಾಮಣ್ಣ:—ಕಾಮಣ್ಣ ಏನೋ....ನಿಮಗ ಆಟದ ರಂಗಣ್ಣ ಅಂತ ಅಂದಲ್ಲ ಅದು ಯಾವ ಆಟಾ ಮಾಡತಿರತೀರಿ ?

ರಂಗಣ್ಣ:—ಏನು ಭಲೇ ದೊಡ್ಡ ಆಟರಿ, ಮಾಸ್ತರ! ಶ್ರೀಕೃಷ್ಣ ಪಾರಿಜಾತ ಮಾಡೀವಿ. ಯಾವಾಗಾದರೂ ಆಗ—ಈಗ ಅಷ್ಟು, ಹಳ್ಳಿಯು ಮ್ಯಾಲಿ ಹೋಗಿ ಆಡಿ ಬರತಿರ ತೇವಿ ಆತ್ರಿ.

ರಾಮಣ್ಣ:—ಒಳೇ ಸಂತೋಷ ರಂಗಣ್ಣ ಅನಾಯಾಸವಾಗಿಯೇ ಇಂದು ನೀವ್ರೊಬ್ಬರು ಕಲಾಕಾ-ರರು ಸಿಕ್ಕಂಗ ಆತು; ಈಗ ನಿವೇ ಒಂದು ದೇವರ ನಾಮ ಅಂದ ಬಿಡ್ರಿ.

ಭೀಮತಿ:—ಚಲೋ ಆತ ನೋಡ್ರಿ ಮಾಸ್ತರ ಒಳ್ಳೇ ಸಿಕ್ಕ ನೋಡ್ರಿ ರಾಗದ ರಂಗಣ್ಣ!....ಕೊರ ವಂಜಿ ಭಾಗದೊಳಗ ಕುಣ ಕುಣದ ಹಾಡತಾನ ನೋಡ್ರಿ.

ರಂಗಣ್ಣ:—ನಮ್ಮದು ಎಂಥಾ ಸಂಗೀತ!.... ಬಯಲಾಟದ ಸಂಗೀತರಿ....ಆದರೂ ನೀವು ಅನ್ನ ಅಂತೀರಿ ಅಂದ ಮ್ಯಾಲಿ ಅಂತೀನರಿ,

ಯಾದವ ನೀ ಬಾ, ಯದುಕುಲನಂದನ । ಮಾಧವ
ಮಧುಸೂದನ ಬಾರೋ ॥
ಸೋದರ ಮಾವನ ಮಥುರಿಲಿ ಮಡುಹಿದ ।
ಯಶೋದ ನಂದನ್ನ, ನೀ ಬಾರೋ ॥ಪಲ್ಲ॥
ಕಣಕಾಲಂದಿಗೆ ಘಣ-ಘಣಯೆನುತಲಿ ।
ಝಣ ಝಣ ವೇಣು ನಾದದಲಿ ॥
ಚಿಣಿಕೋಲು ಚಂಡು ಬೊಗರೆಯನಾಡುತ ।
ಸಣ್ಣ ಸಣ್ಣ ಗೋವಳರೊಡಗೂಡಿ ॥ ೧ ॥
ಶಂಖಚಕ್ರವು ತೋಳಲಿ ಹೊಳವುತ । ಬಿಂಕದಿ
ಗೋವಳ ನೀ ಬಾರೋ ।
ಅಕಳಂಕ ಮಹಿಮಾ ಆದಿನಾರಾಯಣ । ಬೇಕೆಂಬಾ
ಭಕ್ತರಿಗೊಲಿಬಾರೋ ।
ಖಗವಾಹನ ಬಾ: ಬಗೆ ಬಗೆಯಿಂದಲಿ ।
ನಗೆಮುಖದರಸೇ ನೀ ಬಾರೋ ॥
ಜಗದೊಳು ನಿನ್ನ ಮಹಿಮೆಯ ಪೊಗಳುವೆ ।
ಪುರಂದರ ವಿಠಲಾ ನೀ ಬಾರೋ ॥ ೨ ॥

ರಾಮಣ್ಣ:—ಕೇಳಿದಿರಾ!....ಪುರಂದರ ದಾಸರ ಪದವನ್ನು!...ಎಷ್ಟು ಸುಂದರವಾಗಿದೆ? ಪುರಂದರ ದಾಸರು ನಮ್ಮ ಕನ್ನಡ ನಾಡಿನ ಶ್ರೇಷ್ಟಭಗವದ್ ಭಕ್ತರು. ಅವರ ವಾಣಿ ಎಂದಿಗೂ ಅಮರವಾಗಿದೆ. ಅದಕ್ಕೆ ತಕ್ಕಂತೆಯೇ ಹೇಳಿದಿರಿ ರಂಗಣ್ಣ ಆಯಿತು. ಭೀಮಶೀ? ಮಲ್ಲೇಶಪ್ಪ ಎಲ್ಲಿ ಕಾಣಿಸುವದಿಲ್ಲವಲ್ಲ

ಯಾಕ !... ಮಾಸ್ತರ ಮಾತು ಬ್ಯಾಸರ ಅನಿಸಿದ ವೇನು ಮತ್ತ !......

( ಅಷ್ಟರಲ್ಲಿ ಮಲ್ಲೇಶಪ್ಪನ ಪ್ರವೇಶ )

ಭೀಮತಿಃ—ಮಲ್ಲೇಶಪ್ಪಗ ಎಲ್ಲಿ ಸಾವ ಐತ್ರಿ ಮಾಸ್ತರ!....ಬಂದ ಬಿಟ್ಟ ನೋಡ್ರಿ....

ರಾಮಣ್ಣಃ—ಯಾಕ ಮಲ್ಲೇಶಪ್ಪ ಇನ್ನೂ ಸಾಲಿ ಸುರು ಆಗಿಲ್ಲ; ಈಗಿಂದನs ತಡ ಆಗಲಿಕ್ಕ ಹತ್ತಿತಲ್ಲ!....ಹೇಳೂದು ತಲೀಬ್ಯಾಸರ ಆತೇನ ಮತ್ತ!

ಮಲ್ಲೇಶಪ್ಪಃ—ಛೇs ಛೇs ಛೇ ಛೇ........ ಎಂಥಾ ಮಾತರೀ ಮಾಸ್ತರ !....ದೇವರು ಹೇಳಿ ದಂಗ ಹೇಳಲಿಕ್ಕೆ ಹತ್ತೀರಿ. ಇಂಥಾ ಮಾತು ಎಂದರೆ ಬ್ಯಾಸರ ಬರಣ್ರೀ?....ಬರೂ ಮುಂದ ಲಗೂನೆ ಹೊರಟಿದ್ದಿನ್ರಿ, ಆದರ ಹಾದಿಯೊಳಗ, ಆ ತೆಗ್ಗಿನ ಮನೀ ಪರಪ್ಪಗೂ ನೆರಮನೀ ಚೆನ್ನಗೂ ಜಗಳ ನಡೆದಿತ್ರಿ. ಅಲ್ಲೇ ಸ್ವಲ್ಪ ವ್ಯಾಳ್ಯಾಹಿಡಿತ ನೋಡ್ರಿ.

ಕಾಮಣ್ಣಃ—ಆ ಚೆನ್ನ ಪರಪ್ಪನ ಜಗಳ!.... ಮುಗದ ಹೋಯ್ತು.........ಅಂಥಾs, ನ್ಯಾಯ ದೊಳಗ ಬಲಬೇಸಿ ಪಂಚ ಆಗಿ ಹೋಗಿಯಲ್ಲಾ, ಮಲ್ಲೇಶಪ್ಪ ! ಅವರ ನ್ಯಾಯ ನೋಡಿ ಊರಿಗೇ ಸಾಕಾಗೇತಿ, ನೀ ಒಬ್ಬ ಉಳಿದಿದ್ದ ನೋಡ !. ಆರಿಸಿದ ಅಕ್ಕಿಕಾಳಿನ ಹಂಗ.

ರಾಮಣ್ಣಃ—ಅದೇನು ಮಲ್ಲೇಶಪ್ಪ! ಅವರಿಬ್ಬರು ಹೀಗೆ ಜಗಳಾಡಲಿಕ್ಕೆ ಕಾರಣ ಏನು?

ಮಲ್ಲೇಶಪ್ಪಃ—ಯಾತರ ಕಾರಣರೀ? ಒಬ್ಬರ ನೆರಮನೀ ಒಬ್ಬರು ಇದ್ದಾರ. ದಿನಾ ಆಗೂ ಜಗಳ ನನಗ ಗೊತ್ತಿಲ್ಲರಿ. ಆದರ ಇಂದಿಂದ ಮಾತ್ರ ಹಿಂಗ ಆದರಿ—ಪರಪ್ಪ ತನ್ನ ಮನೀ ಮುಂದ ತಾ ಕಸಾ ಮುಸರೀ ಒಗದಿದ್ದ ಅಂತರಿ. ಅದು ಅತ್ತಿತ್ತಾಗಿ ಗಾಳಿಲೆ ಹಾರಿ, ಚನ್ನನ ಮನೀ ಎಲ್ಲಾ ಆಯಿತ ಅಂತರಿ. ಅದಕ್ಕ ಚನ್ನ ಸಿಟ್ಟಿ ಆಗಿ ಪರಪ್ಪನ ಬಡೀಲಿಕ್ಕೆ ಹೋಗಿದ್ದರಿ.

ಭೀಮತಿಃ—ಇದಕ್ಯಾಕ ಚನ್ನ ಬಡಿಲಿಕ್ಕೆ ಹೋಗಬೇಕೂ, ಮಲ್ಲೇಶಪ್ಪ! ಅವನು ಜಗಳಗಡಕ ಕಾಣಸ್ತಾನ. ಪರಪ್ಪ ತನ್ನ ಮನೀ ಮುಂದ ತಾ ಕಸಾ ಒಗದರ, ಅವಂದೇನ ಗಂಟ ಹೋಗತೈತಿ? ಹಾಂಗ ನೋಡಿದರ, ತನ್ನ ಮನೀ ಮುಂದ ತಾ ಬೇಕಾದ್ದ ಮಾಡಲಾಕ ತನಗ ಹಕ್ಕು ಐತಿ ಅಲ್ಲ!

ಮಲ್ಲೇಶಪ್ಪಃ—ಏs ಭೀಮತೀ ನೀನು ಜೆಜ್ಜ ಆಗಿ ನಿರ್ಣಯ ಕೊಡಬ್ಯಾಡ! ಯಾರಕಡೇ ದೋಷ ಐತಿ ಅಂಬೂದನ್ನ ಮಾಸ್ತರು ಹೇಳಲಿs ಹೇಳ್ರಿ ಮಾಸ್ತರ!........

ರಾಮಣ್ಣಃ—ಪರಪ್ಪ ಹಾದಿಯ ಮೇಲೆ ಕಸ ಮುಸರಿ ಒಗಿಯುವದಕ್ಕೂ, ಭೀಮುಶಿ, ಅದು ಅವನ ಹಕ್ಕ ಅದ ಅನ್ನೋದಕ್ಕೂ, ಒಂದ್ಯ ದೋಷ ಅದ. ಮಲ್ಲೇಶಪ್ಪ ಅದು ಅಜ್ಞಾನ. ತನ್ನ ಮನೀ ಮುಂದ ತನಗ, ಹೊಲಸ ಒಗೀಲಿಕ್ಕೆ ಹಕ್ಕ ಅದ ಅನ್ನನವರು, ತನ್ನ ಹೊಣೆ ಏನ ಅದ ? ಇದನ್ನೂ ನೋಡಬೇಕಾಗತದ ಮಲ್ಲೇಶಪ್ಪ. ಇದು ಬಹಳ ಮಹತ್ವದ ಮಾತು. ನೀ ಕೇಳಿದ ಜಗಳ ಕೇವಲ ಆ ವ್ಯಕ್ತಿಗಳಿಬ್ಬರದೇ ಅಲ್ಲ. ನಮ್ಮ ಸಮಾಜದ ಲ್ಲಿಯ ದಿನದ ತೊಡಕು. ಪ್ರತಿಯೊಬ್ಬ ಮನುಷ್ಯ ತಾ ಯಾರು ? ಸಮಾಜಕ್ಕೂ ತನಗೂ ಇರುವ ಸಂಬಂಧವೇನು ? ತನ್ನ ಕೃತಿಯಿಂದ ಸಮಾಜದ ಮೇಲೆ ಯಾವ ಪರಿಣಾಮ ಆಗತದ ? ಅಂಬೂ ದನ್ನ ಪ್ರತಿಯೊಬ್ಬ ಮನುಷ್ಯ ತಿಳಕೊಂಡು ನಡೀ ಲಿಕ್ಕ ಬೇಕಾಗತದ.

ಮಲ್ಲೇಶಪ್ಪಃ—ಅಂದ್ರ್ಯ ನಮ್ಮಷ್ಟಕ್ಯ ನಾವು ಸ್ವತಂತ್ರ ಆಗಿ ಏನೂ ಮಾಡಬಾರದ ಅನ್ನಿ. ಯಾವಾಗಲೂ ಮಂದೀಕಡೇನ್ಯ ನೋಡ್ತಾ ಹೋದ್ರ ನಮ್ಮ ಬಾಳೇವು ಹೆಂಗ ಆದೀತರಿ ಆ ವ್ಯಾಲಿ ?

ರಾಮಣ್ಣಃ—ನಾವು ಸ್ವತಂತ್ರ ಇದೇವಂತ ಸ್ವೇಚ್ಛಾತನದಿಂದ ನಡೀಲಿಕ್ಕೆ ಬರೂದಿಲ್ಲ ಮಲ್ಲೇ ಶಪ್ಪ!....ನೀವು ಹೇಳೂಹಂಗ ಹಳ್ಳಿಯೊಳಗಿನ ಬಹಳ

ಜನ, ನಮ್ಮ—ನಾವು ಸ್ವತಂತ್ರ ಇದೇವ ಅಂತ ತಿಳಿದ,
ಸಿಕ್ಕಂಗ ನಡೀತಾರ ಇಲ್ಲಿ ಕೇಳು!.......ಒಂದೆರಡು
ಉದಾಹರಣೆ ನಿಮ್ಮ ಮುಂದ ಇಡತೀನಿ. ನಮ್ಮ
ಬಚ್ಚಲನೀರನ್ನ, ನಾವು ಹರೀ ಕಡೆದು, ಹೋಗ
ಗೊಡದ, ಹಾದಿಯ ಬದಿಯಲ್ಲಿ ನಿಲ್ಲಲಿಕ್ಕೆ ಕೊಟ್ರ,
ಅದರಿಂದ ಗುಂಗಾಡ ಹುಟ್ಟಿ, ಇಡೀ ಹಳ್ಳೀನ
ಚಳಿಜ್ವರದಿಂದ ನರಳ ಬೇಕಾಗತದ. ಮತ್ತೊಂದು
ಇಲ್ಲಿ ಕೇಳು—ನಾವು ಕೆರೆ ಬಾವಿ ನೀರು ಕುಡಿಯ
ಲಿಕ್ಕೆ ಉಪಯೋಗ ಮಾಡತಿರತೇವಿ, ಅವುಗಳನ್ನ
ಸರಿಯಾಗಿ ಉಪಯೋಗ ಮಾಡದ ನನ್ನ ಹಕ್ಕ ಅದ
ಅಂತ ತಿಳಿದು, ಹೊಲಸ ಮಾಡಿ ನೀರು ಕೆಡಿಸಿದರ,
ಅದರಿಂದ ಆಗು ದುಷ್ಪರಿಣಾಮಕ್ಕ ಇಡೀ ಸಮಾ
ಜನ, ಬಲಿ ಆಗಬೇಕ ಆಗತದ. ಒಟ್ಟಿಗೆ ತನ್ನ ಹಕ್ಕ
ಅದ ಅನ್ನೂ ಮುಂದ, ತನ್ನ ಹೊಣೆ ಏನ ಅದ?
ಅದನ್ನೂ ಮರಿಬಾರದು.

ಭೀಮಶಿ:—ಹೊಣೆ ಅಂದ್ರ ಏನ್ರಿ? ನಾವು
ಏನಾದರೂ ಮಾಡು ಮುಂದ ಎರಡನೇದವರನ್ನ ಕೇಳಿ
ಮಾಡಬೇಕೇನ್ರಿ ?

ರಾಮಣ್ಣ:— ಭೀಮಶಿ, ಮಲ್ಲೇಶಪ್ಪ ಇಲ್ಲಿ
ಕೇಳ್ರಿ ! ಹಕ್ಕು-ಹೊಣೆಗಳ ಇವುಗಳ ಅರ್ಥನ, ನಿಮ
ಗಿನ್ನೂ ಸರಿಯಾಗಿ ತಿಳದಂಗ ಕಾಣುದುಲ್ಲ. ಇದನ್ನ

ಚಿತ್ತಗೊಟ್ಟ ಕೇಳ್ರಿ. ಮಾಡುವದು ನನ್ನ ಹಕ್ಕ ಅದ ಅಂತ ತಿಳಿದು, ಓಣಿಯೊಳಗ ನಿಂತು, ಅಲ್ಲದ-ಸಲ್ಲದ ಮಾತನಾಡಿದರೆ, ಜನರಿಗೆ ತೊಂದರೆ ಆಗತದ, ಅಂಬೂ ಮಾತು ನಮಗ ಗೊತ್ತ ಇರಬೇಕು. ಹಾದಿ ಯಿಂದ ಹೋಗು ಕಾಲಕ್ಕ. ಕೈಬೀಸಿಕೊಂತ ಹೋಗ ಲಿಕ್ಕೆ ನನಗ ಹಕ್ಕ ಅದ; ಅಂತ ತಿಳಿದು; ಬರೂ-ಹೋಗುವ ಜನಾ ಲೆಕ್ಕಿಸದೆ ಹಾಗೆ ಹೋದ್ರ, ಜನರಿಗೆ ತ್ರಾಸ ಆಗತದ. ಇಲ್ಲಿ ನಾವು ಹೊಣೆಗೆಟ್ಟ ನಡದಂತಾ ಗತದ ಅದಕ್ಕ ನಮ್ಮ ಯಾವದೇ ನಡೆ-ನುಡಿ ಯಿಂದ ನಮ್ಮ ಹಿತಾನೂ ಸಾಧಿಸಿರಬೇಕು. ಎರಡನೇ ದವರಿಗೆ ತೊಂದರೆನೂ ಆಗಬಾರದು. ಅಂಬೂದನ್ನ ಪೂರಾ ಲಕ್ಷದಲ್ಲಿ ಇಟ್ಟುಕೊಂಡು ನಾವು ಯಾವಾ ಗಲೂ ನಮ್ಮ ಬಾಳ್ವೆ ಸಾಗಸತಿರಬೇಕು. ಒಮ್ಮೊಮ್ಮೆ ಒಬ್ಬ ಮನುಷ್ಯ ಅಜ್ಞಾನದಿಂದ ಮಾಡಿದ ತಪ್ಪಿಗೆ ಇಡೀ ಸಮಾಜ ಬಲಿ ಆಗಬೇಕಾಗತದ ತಿಳೀತ್ಯ!

ಮಲ್ಲೇಶಪ್ಪಃ—ಮಾಸ್ತರ! ನೀವ ಏನೇನ ಹೇಳಿದಿರೆಲ್ಲಾ, ಇದು ಬರಾಬರಿ ಅದರಿ. ಆದರ ಹಕ್ಕಾ—ಪಕ್ಕಾ ಹೊಣೆ—ಗಿಣಿ ಅಂಬೂ ಮಾತ ನಮ್ಮಂಥಾ ಅಜ್ಞಾನಿ ಜನಕ್ಕ ಹೆಂಗ ತಿಳಿಯೂದು ಅಂತೀನಿ—

ರಾಮಣ್ಣಃ—ಅಜ್ಞಾನಿ ಜನ ಸಜ್ಞಾನಿ ಆದಾಗ

ಎಲ್ಲಾ ತನ್ನಿಂದ ತಾನೇ ತಿಳಿತದ ಮಲ್ಲೇಶಪ್ಪ!....
ಯಾವ ಅಜ್ಞಾನ ಮನುಷ್ಯನು ತನ್ನ ಸ್ವಂತ ಹಿತ
ಗೊತ್ತಿಲ್ಲ; ತನ್ನ ಸಂಸಾರ ಸರಿಯಾಗಿ ಸಾಗಿಸಲಿಕ್ಕೆ
ಬರುವದಿಲ್ಲ; ಅಂಥ ಮನುಷ್ಯ ತನ್ನ ಸಮಾಜದ
ಹಿತಾ ಅಹಿತ, ನೋಡೋದು ಸಾಧ್ಯನ್ಹ ಇಲ್ಲ.
ಅಜ್ಞಾನಿ ಜನ, ದನ ಇದ್ದಂಗ ಸಮಾಜದ ಕಲ್ಯಾಣ
ಆ ಜನರಿಂದ ಹ್ಯಾಂಗ ಆಗಬೇಕು? ಸಾಕ್ಷರರಿಂದನ್ಹ
ಸಮಾಜದ ಉದ್ಧಾರ ಆಗೂದು.

ಭೀಮಾಶಿಃ— ನೋಡಿದ್ಯಾ ಮಲ್ಲೇಶಪ್ಪ !
ಮಾಸ್ತರು ನಮ್ಮ್ಯಾಲೇ ಮುಟ್ಟೆ ಒಗದರಲ್ಲ ಕಡಿಕ.
ಕಲೀಲಾರದ ಜನಾ ನಾವು ಕಲ್ಲ ಇದ್ದಂಗ ನೋಡಪಾ.

ಮಲ್ಲೇಶಪ್ಪಃ—ಇದರಾಗ ಸುಳ್ಳು ಏನ ಅದ
ಭೀಮಶೀ ? ನಮ್ಮದು-ನಮಗೆ ತಿಳಿಲಾರದೆ, ಊರವು
ಗೇಡಿಗಳು ನಾವು. ಇನ್ನ ನಾಲ್ಕು ಮಂದಿಗೆ ಬುದ್ಧಿ
ಹೆಂಗ ಹೇಳೇವು ? ನಮ್ಮಂಥವರಿಂದ ಹಿತಾ ಹೆಂಗ
ಆದೀತು? ಬುದ್ಧಿ ಇಲ್ಲದ ನಮ್ಮಂಥ ಪಂಚರು,
ಕೆಂಚರ ಹಂಗ ಕಾರಭಾರ ಮಾಡತಾ ತಿರಗತೇವು.

ಕಾಮಣ್ಣಃ—ಏಸೀ ಬಿಳೇವು ಆದೂ ಅಂದ್ರ
ಆತು, ತಿಳೀದೆ ಇರಲಿ. ಎಲ್ಲರೂ ಹಿರ್ಯಾಮನುಷ್ಯರೇ
ಆಗತಾರ. ಮಾಸ್ತರ ಹೇಳಿದ ಮಾತ, ಎಷ್ಟು ಜನಕ್ಕ
ಗೊತ್ತ ಐತಿ ?

ರಾಮಣ್ಣ:— ಮೇಲೆ ಹೇಳಿದ ಮಾತು ನನಗ ಒಬ್ಬಗ ಗೊತ್ತ ಅದ ಅಂತ ತಿಳಕೊಳ್ಳ ಬ್ಯಾಡರಿ. ಕಲಿತ ಎಲ್ಲಾ ಜನರಿಗೂ ಗೊತ್ತ ಅವ. ನೀವೂ ಕಲೀರಿ; ನಿಮಗೂ ಇಷ್ಟ್ಯ ಆಗಾಕ, ಇದಕ್ಕಿಂತ ಹೆಚ್ಚಿನ ವಿಚಾರ ತಿಳಿತದ. ನನಗ ಹೀಂಗ ಮಾತಾಡಲಿಕ್ಕೆ ಬರತದ ಅಂತ ಬಹಳ ಹೊತ್ತ ಹಾಗೇ ಕೂತರ, ನಿಮ್ಮೆಲ್ಲರ ನಿದ್ರೆಗೆ ತೊಂದರೆ ಆದೀತು. ನಾನು ಹೊಣೆಗೆಟ್ಟು ನಡದಂಗ ಆದೀತು. ಅದಕ್ಕ್ಯ ಮತ್ತೆ ನಾಳೆ ಬರುತ್ತೇನೆ. ನಮಸ್ಕಾರ. ( ಉಳಿದ ಜನರೂ ಮಾಸ್ತರರಿಗೆ ಪ್ರತಿ ನಮಸ್ಕರಿಸಿ ತೆರಳುವರು. )

## ನಾಲ್ಕನೆಯ ದೃಶ್ಯ

## ನಾಡಿಗಾಗಿ ಕಲಿ

( ಹಿಂದಿನ ದಿನದಂತೆ ಈ ಹೊತ್ತೂ ಜನ ಸೇರಿದೆ. ಎಲ್ಲರೂ ಹುರುಪು-ಹುಮ್ಮಸಗಳಿಂದ ಕಾದು ಕುಳಿತು; ರಾಮಣ್ಣ ಮಾಸ್ತರರ ದಾರೀ ಕಾಯುತ್ತಿದ್ದಾರೆ. ಕೂಡಿದ ಜನರಲ್ಲಿ ಕೆಳಗಿನಂತೆ ಸಂಭಾಷಣೆ ನಡೆದಿದೆ. )

ಭೀಮಶಿ:— ಏನು!.... ಮಲ್ಲೇಶಪ್ಪ ! ನಿನ್ನೆ ಮಾಸ್ತರರು, ಏನೋ ಅಂದ್ರು ಅಂತ. ಈ ಹೊತ್ತೇನ

ರಂಗಣ್ಣಃ—ಮಾಸ್ತರs ನೀವ ಬರದಿದ್ದರನೂ ನಿಮ್ಮ ಬದಲಿ ನಮ್ಮ ಮಲ್ಲೇಶಪ್ಪ ಲಕ್ಚರ ಹೋಡಿ ಲಿಕ್ಕೆ ಹತ್ಯಾನರಿ; ಅದನ್ನs ಕೇಳಕೊಂತ ಕೂತೀವಿ.

ರಾಮಣ್ಣಃ—ಏನೂ ಅಡ್ಡಿಯಿಲ್ಲ ರಂಗಣ್ಣ. ಬಹಳ ಸಂತೋಷ. ನಮ್ಮ ದೇಶದ ಹಳ್ಳಿಯೊಳಗಿನ ಪ್ರತಿಯೊಬ್ಬ ರೈತನೂ ತನ್ನ ವಿಚಾರವನ್ನ ನಾಡಿನ ಮುಂದಿಡುವಂಥ ಕಾಲ ಬಂದದ. ಪ್ರಜಾಪ್ರಭುತ್ವ ರಾಷ್ಟ್ರದೊಳಗ, ಪ್ರತಿಯೊಬ್ಬ ನಾಗರಿಕನದೂ ಜವಾಬ್ದಾರಿ ಅದ.

ಮಲ್ಲೇಶಪ್ಪಃ—ಮಾಸ್ತರs.... ನೀವೂ ಮುದಕ ಮನಸ್ಯಾನ ಆಡಸ್ಕೊಡತೀರೇನ್ರಿ ?... ಅದ ಇರಲ್ರಿ. ಈಗ ನಿಮ ಏನೇನೋ ಅಂದಿರೆಲ್ಲಾ ! ಅದೇನ ನೀವ ಕೈಯಾಗ ಹಿಡಿದ್ದಿರಿ ಆ ವರತಮಾನದಾಗ ಬರ ದೃತಿ ಏನ್ರಿ ?....

ರಾಮಣ್ಣಃ—ಹೌದ ಮಲ್ಲೇಶಪ್ಪ ಈ ವರ್ತ ಮಾನ ಪತ್ರದೊಳಗ ಏನ ಅದ ಅಂಬೂದನ್ನs.... ನಾ ಇಂದು ಹೇಳವ ಇದ್ದೀನಿ. ಅದಕ್ಕಿಂತ ಮೊದಲು ದಿನದ ಹಂಗ ಒಂದು ದೇವರ ನಾಮವನ್ನ ಯಾರಾ ದರೂ ಹೇಳಿದರ ಒಳ್ಳೇದಾಗತದ.

ಮಲ್ಲೇಶಪ್ಪಃ—ಯಾರ ಏನ್ರಿ ! ಬಂದಾನಲ್ಲರಿ ಆಟದ ರಂಗಣ್ಣ! ಏs ರಂಗಣ್ಣ ನಿನ್ನಿನಹಂಗ, ಬಂದು ಬೇಶ್ಯಾಗಿ ಹೊಡದ ಬಿಡು.

ರಾಮಣ್ಣ:—ಹೌದು ರಂಗಣ್ಣಾ ನಿನ್ನೆ ಪುರಂದರ ದಾಸರ ಪದ ಹೇಳಿದಂಗ ಇಂದು, ಒಂದು ವಚನ ಹೇಳಿ ಬಿಡ್ರಿ.

ರಂಗಣ್ಣ:—(ಸರಾಗವಾಗಿ ಕೆಳಗಿನ ವಚನ ಹೇಳುವನು.)

ಎನಿಸು ಕಾಲ ಕಲ್ಲು ನೀರೊಳಗಿದ್ದರೇನು ?
ನೆನೆದು ಮೃದುವಾಗ ಬಲ್ಲುದೇ ? ಎನಿಸು
ಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲ್ಲಿ
ದೃಢವಿಲ್ಲದ ನಕ್ಕ ? ನಿಧಾನವ ಕಾಯ್ದಿದ್ದ
ಬೆಂತರನಂತೆ, ಅದರ ವಿಧಿ ಎನಗಾಯಿತ್ತು ಕೂಡಲ
ಸಂಗಮದೇವಾ ॥ ೧ ॥

ರಾಮಣ್ಣ:—ಕೇಳಿದಿರ್‍ಯಾ ಮಲ್ಲಿಶಪ್ಪ ! ಮಹಾ ಪುರುಷರ ವಚನವನ್ನು ಬಸವಣ್ಣನವರ ಈ ಒಂದೊಂದು ಮಾತೂ, ಅಮೃತವನ್ನು ಸುರಿಸುತ್ತಿವೆ ನೋಡಿರಿ. ಬೊಕ್ಕಸವನ್ನು ಕಾಯುವ ಆಳಿಗೆ, ಆ ಬೊಕ್ಕಸದ ಸುಖ ಹ್ಯಾಗೆ ಇಲ್ಲೋ ಹಾಗೇ ಭಕ್ತನ ಮನಸ್ಸಿನಲ್ಲಿ ದೃಢ ಭಾವನೆ ಇಲ್ಲದಿದ್ದರೆ,- ಎಷ್ಟು ಕಾಲ ದೇವರನ್ನು ಪೂಜಿಸಿದರೂ ವ್ಯರ್ಥ; ಅನ್ನುವ ಮಾತನ್ನ ಬಸವೇಶ್ವರರು ಹೇಳಿ ಹೋಗಿದ್ದಾರೆ. ಈ ಮಾತನ್ನ ಇನ್ನಷ್ಟು ವಿಚಾರಮಾಡಿ ತಿಳಿದು ನೋಡಿದರ, ಅಜ್ಞಾನಿ ಮನುಷ್ಯ ನಾಡಿನೊಳಗ ಇದ್ದರ, ನಾಡಿಗೇನು ಲಾಭ ಅನ್ನುವ ಮಾತನ್ನು, ಇಂದು ಸ್ಪಷ್ಟವಾಗಿ ಹೇಳಿದರೂ ತಪ್ಪ ಆಗಲಿಕ್ಕಿಲ್ಲ.

ಭೀಮಶಿ:— ಇದೇನ್ರಿ ಮಾಸ್ತರ! ದಿನಾ ಒಂದೊಂದು ಹೊಸಾದ್ನ, ಹೇಳಲಿಕ್ಕೆ ಹತ್ತಿರಲ್ಲಾ! ಮೊದಲ ಅಂದ್ರಿ; ನಿನ್ನ ಸಲುವಾಗಿರೇ ನೀ ಕಲೀ ಬೇಕೂ ಅಂತ ಆ ಮ್ಯಾಲಿ ಹೇಳಿದಿರಿ; ನಿನ್ನ ಪರ ಪಂಚಿ ಸಲುವಾಗಿರೇ ನೀ ಕಲೀ ಬೇಕೂ ಅಂತ. ನಿನ್ನೆ ಹೇಳಿದಿರಿ ಜನರೊಳಗ ಹೆಂಗ ಇರಬೇಕೂ ಅಂಬೂ ಸಲುವಾಗಿ ಕಲೀ ಬೇಕೂ ಅಂತ. ಈಗ ಅನ್ನಲಿಕ್ಕೆ ಹತ್ತಿರಿ.— ಕಲೀಲಾರದ ಮನುಷ್ಯನಿಂದ ನಾಡಿಗೆ ಲಾಭ್ಯ,.... ಇಲ್ಲಾ ಅಂತ ಅಂದ್ರ ನಮ್ಮಂಥ ಒಕ್ಕಲಿಗೇರು ಯಾತಕೂ ಉಪಯೋಗ್ಯ ಇಲ್ಲ ಅನ್ರಿ.

ಮಲ್ಲೇಶಪ್ಪ:—ನೀವು ಹಿಂಗ ಏನು ಅಂತೀರಿ ಮಾಸ್ತರ?...ಬಿತ್ತಿ ಬೆಳೀಮಾಡಿ; ನಾಡಿಗೇ ಅನ್ನ ಹಾಕುವ ರೈತರ ನಾವು. ನಮ್ಮಿಂದ ಏನೂ ಲಾಭ್ಯ ಇಲ್ಲ; ಅಂತೀರಿ ಅಂದ್ರ ಏನ್ರಿ?

ಕಾಮಣ್ಣ:—ಬಿಳೀ ಕಾಗದ ಮ್ಯಾಲಿ ಕರೀ ಗೆರಿ ಹಾಕೋತ ಕೂತ್ರ, ನಾಡಿನ ಜನರ ಹೊಟ್ಟಿ ತುಂಬತದ ಏನ್ರಿಪಾ!....ನಾವಿಲ್ಲದ ನಾಡಿನ್ಯಾಗ ಏನ ನಡೀತೈತಿ 'ಕೋಟಿಯೊಳಿದ್ದಾದ ಒಳಗ ಮೋಟೇಯಿ ದ್ದ್ಯಾನ್ಯ ಮೇಲ' ಅಂತ ಹಿರೇರ ಹಿಡದು ಹೇಳತಾ ಬಂದಾರರಿ.

ರಾಮಣ್ಣ:—ಭೀಮಶಿ! ಮಲ್ಲೇಶಪ್ಪ! ಕಾಮಣ್ಣ!....ಈಗ ನೀವೆಲ್ಲ ಏನ ಹೇಳಿದಿರಿ ಅವು

ಪೂರ್ಣ ಸರಿ ಅದ. ನಮ್ಮ ದೇಶಕ್ಕ ರೈತನ್ನ ಅನ್ನ ದಾತಾ. ಆ ಅನ್ನ ದಾತಾನ್ನs ಇಂದು ದೇಶದ ಪಿತಾ ಅಂದ್ರs ನೀವೆಲ್ಲಾರೂ ರಾಜರ ಇದ್ದಂಗ. ನಿಮ್ಮಿಂದನs ದೇಶದ ರಾಜ್ಯ ನಡಿಯೋದು. ರಾಜಾ ತನ್ನ ರಾಜ್ಯವನ್ನ ಒಳ್ಳೇ ರೀತಿಯಿಂದ ಸಾಗಸ ಗೊಂಡ ಹೋಗ ಬೇಕಾದರ ಅವಗ ವಿವೇಕ ಅಂಬೂದು ಬೇಕಂತೇರೋ? ಬೇಡ ಅಂತೀರೋ?

ಮಲ್ಲೇಶಪ್ಪ:—ಕೇಳಿರ್ರೇಪಾs ನಮ್ಮ ಹತ್ತ ಮಾತನ್ನ ಒಂದ ಮಾತಿನೊಳಗ ಮುರದ ಹಾಕಿ ದರು ಮಾಸ್ತರು. ಕಲ್ತಮಂದಿ ಮಾತಿನಾಗ ಕೇಳ್ಯಾ ರಂತಿರ್ರ್ಯಾ!........ಮ್ಯಾಲಿ ನಮ್ಮನs ರಾಜಾ ಮಾಡಿ ಬಿಟ್ರು. ಒಳ್ಳೊಳೇ ರಾಜ್ಯರಿ ಉಳ್ಯಾಡಿ ಹೋಗ್ಯಾ ವಂತ ಇನ್ನ ನಮ್ಮಂಥ ಗುದ್ಲಿ ಗಣೇರ ರಾಜ್ಯಕಿ ಎಲ್ಲಿನಡದಿತರೀs ಮಾಸ್ತರ ?....

ರಾಮಣ್ಣ:—ಮಲ್ಲೇಶಪ್ಪ! ನೀಹೇಳೂ ರಾಜರ ಉಳ್ಯಾಡಿ ಹೋದದ್ದು ನಿಜವೇs ಅದ. ಈಗ ಗುದ್ದಲಿ ಹಿಡಿಯುವ ಕೈಯು, ರಾಜದಂಡ ಹಿಡದು ರಾಜಕಿ ಮಾಡಲಿಕ್ಕೆ ಹತ್ಯದ. ಈಗ ಅಷ್ಟೇ ಅಲ್ಲ—ಮುಂದ ಆದರೂ, ಎಂದ ಆದರೂ, ಅದs ಕೈಯಿಂದ ರಾಜ್ಯ ನಡೀತದ ಅಂಬೂದನ್ನ ಮರೀಬ್ಯಾಡರಿ. ಇಲ್ಲಿ ಸ್ವಲ್ಪ ನೋಡ್ರಿ. ಇಂದಿನ ವರ್ತಮಾನ ಪತ್ರದೊಳಗ ಬಂದದ,— ಇನ್ನ ಸ್ವಲ್ಪ ದಿವಸದೊಳಗ ದೇಶದ

ತುಂಬೆಲ್ಲ ಸಾರ್ವತ್ರಿಕ ಚುನಾವಣಿ ನಡಿಯೂವ ಇದ್ದಾವ. ಆ ಕಾಲಕ್ಕ ನೀವೆಲ್ಲ ಪ್ರಜೆಗಳು ಕೂಡಿ ಯೇ, ನಾಡಿಗೆ ಎಂಥಾ ರಾಜ್ಯ ಬೇಕು ? ಅಂಬೂ ದನ್ನ ನೀವೇ ನಿಶ್ಚಯ ಮಾಡಾವರ ಇದ್ದೀರಿ. ತಿಳೀತು.

ಮಲ್ಲೇಶಪ್ಪ:—ನಮ್ಮನ್ನ ಯಾರ ಕೇಳತಾರರೀ ಹಳ್ಳಿ ಒಳಗ ಇದ್ದ ಒಕ್ಕಲಿಗೇರನ್ನ, ಈಗ ಯಾರದೊ ಮೋರೂನ ರಾಜ್ಯಕಿ ನಡದೈತಿ ಅಂತ ಅಲ್ಲರಿ.....

ರಾಮಣ್ಣ:— ( ನಸು ನಕ್ಕು ) ಮಲ್ಲೇಶಪ್ಪ ಮೋರೂ ಅಲ್ಲ ನೆಹರು. ಪಂಡಿತ ಜವಾಹರಲಾಲ ನೆಹರುರವರೇ ನಮ್ಮ ಮುಖ್ಯ ಮಂತ್ರಿಗಳಾಗಿ ರಾಜ್ಯದ ಸೂತ್ರಗಳನ್ನ, ನಿರ್ವಹಿಸುತ್ತಿರುವದು ಸರಿ ಅದ. ಆದರೆ ಅವರು ರಾಜರಲ್ಲ. ನೀವೇ ಆರಿಸಿ ಕಳಿಸಿದಂತ, ನಿಮ್ಮ ನಾಡಿನ ಸೇವೆ ಮಾಡ ಲಿಕ್ಕೆ ಹೊದಂಥ, ಒಬ್ಬ ಸೇವಕರೇ ಅನ್ನಬಹುದು.

ಭೀಮಶಿ:—ಇದೇನ್ರಿ? ಅಂಥಾ ದೊಡ್ಡ ಮನ ಸ್ಯಾಗ ಸೇವಕ ಅನೂನ್ರ್ರ್ಯ! ನೀರಗೆಟ್ಟ ಮಾತ ಆಗೀತಲ್ಲರಿ.

ರಾಮಣ್ಣ:—ಭೀಮಶೀ ? ನೀವೆಲ್ಲರೂ ಅವರಿಗೆ ಸೇವಕ ಅಂದರೂ ಅಷ್ಟೆ; ಆಳ ಅಂದರೂ ಅಷ್ಟೇ, ಅರಸ ಅಂತ ಕರೆದರೂ ಅಷ್ಟೇ ಅದ. ಅವರು ಮಾತ್ರ ನಿಮ್ಮಿಂದನ ಅಲ್ಲಿಗೆ ಹೊಗ್ಯಾರ. ನೀವು

ಬೇಕು ಅನ್ನುವಷ್ಟು ದಿವಸ ಆ ಸ್ಥಾನಕ್ಕ ಇರತಾರ. ನೀವು ಬ್ಯಾಡಾ ಅಂತ ಅಂದ ಗಳಿಗ್ಗೆ ನ್ಯ, ಅವರು ಅಲ್ಲಿಂದ ದೂರ ಆಗ ಬೇಕಾಗತದ. ಅಂದ ಮ್ಯಾಲಿ ದಿಲ್ಲಿಯೊಳಗ ಇರುವ, ಅವರು ರಾಜರೋ? ನಿನು ಹಳ್ಳಿ ಒಳಗ ಇರುವ, ನೀವ ರಾಜರೋ? ಅಂಬೂ ದನ್ನ ನೀವೇ ವಿಚಾರ ಮಾಡ್ರಿ.

ಮಲ್ಲೇಶಪ್ಪ:— ಇಂಥಾದ ಎಲ್ಲಾ ದೇಸ ಮ್ಯಾಲಿನ ಸುದ್ದೀ, ನಮ್ಮಂಥ ಅಜ್ಞಾನಿ ಗೋಳಗಿ ಹೆಂಗ ತಿಳಿಬೇಕ್ರಿ? ಮಾಸ್ತರ್ರ? ನಿನ್ನೋ ಹಿಂದಕ ಗೊರಾಗೋಳ ರಾಜ್ಯಕಿ ನಡದೈತಿ ಅಂತಿದ್ರು ಈಗ ನೆರೂನ ರಾಜ್ಯಕಿ ನಡದೈತಿ ಅಂತಾರು ಇದಿಷ್ಟು, ಗೊತ್ತದರಿ. 'ಯಾವ ರಾಜ್ಯ ಬಂದರ ನೀನು? ರಾಗಿ ಬಿಸೂದು ಬಿಡಿಲಿಲ್ಲ.' ಅಂತಾರಲ್ಲ ಹಂಗ ನಮ್ಮ ಹ್ವಾಟೀ ನಮಗ ಹತ್ಯದರಿ.

ರಾಮಣ್ಣ:—ಇದೊಂದು ದೊಡ್ಡ ತಪ್ಪ ಮಲ್ಲೇಶಪ್ಪ. ಯಾವ ಒಂದ ದೇಶದ ನಾಗರಿಕರು ಅಂತ ನಾವು ಇದ್ದು; ಆ ದೇಶದ ವಿಷಯಕ್ಕ ತಿಳವಳಿಕೆ ಇರದಿದ್ದರ ನಮಗೂ, ಪಶುಗಳಿಗೂ ಬೇಧನಾ ಇಲ್ಲ. ಮೊದಲು ಇದ್ದದ್ದು ಪರತಂತ್ರ ಆಳಿಕೆ. ಯುರೋಪಿಯನ್‌ರು ಬಂದು ನಮ್ಮನ್ನ ಆಳುತ್ತಿದ್ದರು. ಆದರ ಇಂದು ನಮ್ಮನ್ನ ನಾವು ಆಳಲಿಕ್ಕೆ ಹತ್ತೀವಿ. ಈ ಎರಡೂರಲ್ಲಿಯ ಭೇದ ಎಲ್ಲಿಯ ತನಕ ಪ್ರತಿಯೊಬ್ಬ ಮನುಷ್ಯಗ ತಿಳಿಯುವದಿಲ್ಲ ಅಲ್ಲಿಯ ತನಕ ಎಂಥಾ

ಪ್ರಜಾಪ್ರಭುತ್ವನೂ ವ್ಯರ್ಥವಾದದ್ದು. ನಾವೆಲ್ಲ ಸ್ವತಂತ್ರ ಭಾರತದ ನಾಗರಿಕರೂ ಅನ್ನುವ ಕಲ್ಪನೆ; ನಾವು ನಮ್ಮ ದೇಶಕ್ಕಾಗಿ ಮಾಡಬೇಕಾದ ಕರ್ತವ್ಯದ ತಳಮಳ ಇವುಗಳ ಸರಿಯಾದ ತಿಳವಳಿಕೆ ಇಲ್ಲದ ಹೋದರ, ನಾವು ಇಂಥ ಪವಿತ್ರ ನಾಡಿನೊಳಗ ಹುಟ್ಟಿಯೂ ಕೂಡ, ವ್ಯರ್ಥವಾದದ್ದು.

ಮಲ್ಲೇಶಪ್ಪ:—ನಮ್ಮ ದೇಶದ ಮ್ಯಾಲಿ ನಮಗ ಅಭಿಮಾನ ಇಲ್ಲ ಅನಬ್ಯಾಡರಿ ಮಾಸ್ತರ! ಆದರ ಇದೆಲ್ಲ ನಮ್ಮಂಥವರಿಗೆ ಹೆಂಗ ತಿಳದೀತರಿ? ದಿನಾ ನಿಮ್ಮ ಹಂಗ ವರತ್-ಮಾನ ಓದಿದವರಿಗೇ ಗೊತ್ತು. ಒಕ್ಕಲಿಗೇರಿಗೆ ಯಾತಕ್ಕ ಬೇಕರಿ ಇದೆಲ್ಲ.

ರಾಮಣ್ಣ:—ನಾವೆಲ್ಲ ಹೀಗೆ ತಿಳಕೊಂಡೇ ನೂರಾರು ವರ್ಷ ಇನ್ನೊಬ್ಬರ ಗುಲಾಮರಾಗಿ ಬಾಳೀವಿ. ನಮ್ಮ ಸ್ವಾಭಿಮಾನ ಮರೆತು ಇನ್ನೊಬ್ಬರ ಸೇವಕ ರಾಗಿದ್ದಿವಿ. ಬಂಗಾರದಂಥಾ ನಮ್ಮ ನಾಡನ್ನ ಇನ್ನೊಬ್ಬರಿಗೆ ಒಪ್ಪಿಸಿ; ಅನ್ನ-ಅನ್ನ ಅಂತ ಬಾಯಿ ಬಿಟ್ಟೇವಿ. ಆದರೂ ಕಡೆಗ್ ಆ ಮಹಾತ್ಮರ ಪುಣ್ಯದಿಂದ ನಾವು ಸ್ವತಂತ್ರ ಆಗೀವಿ. ನಮ್ಮ ದೇಶ ನಾಲ್ಕ ದೇಶದೊಳಗ ದೊಡ್ಡಸ್ತನ ಪಡದದ. ನಮ್ಮ ಮುಖಂಡರು ಹಗಲೀ ರಾತ್ರೀ ಒಂದೇ ಸವನೆ ದೇಶದ ಸಲುವಾಗಿ ದುಡಿಯಲಿಕ್ಕೆ ಹತ್ಯಾರ. ಆದರೆ ನಿಮಗೆಲ್ಲಾ ಇದರ ಕಲ್ಪನೆ ಕೂಡ ಇಲ್ಲ ಅಂಬೋದು ಕೆಡಕೆನಿಸುವ ಮಾತು.

ನಿರಕ್ಷರ ಅಂಬೂ ನಿದ್ದೆಯಿಂದ ನೀವೆಲ್ಲ ಹಳ್ಳಿಗರು ಎಲ್ಲಿಯು ತನಕ ಏಳುವದಿಲ್ಲ ಅಲ್ಲಿಯು ತನಕ ನಿಮಗ ನಿಮ್ಮ ದೇಶದ ಬಗ್ಗೆ ಪ್ರೇಮ ಹುಟ್ಟಲಾರದು. ಅಭಿಮಾನ ಬೆಳೆಯಲಾರದು. ದೇಶಕ್ಕ ಏನಾದರೂ ಹಿತಾ ಮಾಡೀರಿ ಅಂಬೂ ಮಾತೂ ನಿಶ್ವಾಸದ್ದಲ್ಲ. ಇಷ್ಟೇ ಅಲ್ಲದ ದೇಶದ ಪ್ರಗತಿಗೂ ಇದರಿಂದ ತೊಡಕ ಅಂಬೂದನ್ನ ಸ್ಪಷ್ಟವಾಗಿ ಹೇಳಬಹುದು.

ಭೀಮುಶಿಃ—ನಮಗೆಲ್ಲಾ ಹಿಂಗ ಹೇಳಲಿಕ್ಕೆ ಹತ್ತೀರಿ. ಆದರ ಜಗದೊಳಗ ಎಲ್ಲಾ ದೇಶದವರೂ ಕಲ್ತವರ, ಇದಾರೇನ್ರಿ ?

ರಾಮಣ್ಣಾಃ—ಒಳ್ಳೇ ಪ್ರಶ್ನೆ ಕೇಳಿದಿ ಭೀಮುಶಿ. ನಮ್ಮ ದೇಶದೊಳಗ ಇರುವಷ್ಟು ಅಜ್ಞಾನ ನಿರಕ್ಷರ ತನ ಉಳಿದ ಯಾವ ಸುಧಾರಿಸಿದ ರಾಷ್ಟ್ರದೊಳಗನೂ ಇಲ್ಲ ಅಂತ, ನಿಶ್ಚಯವಾಗಿ ಹೇಳ ಬಹುದು. ಇಂಗ್ಲಂಡ, ಅಮೇರಿಕಾ, ರಶಿಯಾ, ಜಪಾನ ಅನ್ನು ವಂಥ ದೇಶಗಳೊಳಗ ನೂರಕ್ಕ ೫೦, ೬೦, ೮೦, ೯೦ರ ತನಕ ಕಲಿತವರು ಇದ್ದಾರ. ಆದರ ಅದು ನಮ್ಮ ದೇಶದೊಳಗ, ನೂರಕ್ಕ ೧೦–೧೫ ರಷ್ಟ ಕಲಿತವರು ಇದ್ದಾರೋ ? ಇಲ್ಲೋ ? ಅಂಬೂದು ಸಂಶಯ ಅದ. ಇದರಿಂದ, ನಮ್ಮ ದೇಶ ಜಗತ್ತಿನೊಳಗ ಎಷ್ಟ ಹಿಂದ ಅದ ಅಂಬೂದನ್ನ ನೀವ್ರ ನೋಡ ಬಹುದು. ಸುಧಾರಸಿದ ದೇಶದೊಳಗ ಪ್ರತಿಯೊಬ್ಬ

ಮನುಷ್ಯ ರೈತನಿರಲಿ, ಕೂಲಿಕಾರನಿರಲಿ ವರ್ತ
ಮಾನ ಪತ್ರ ಓದದೆ, ಇರೋದೇ ಇಲ್ಲ. ಇದ
ರಿಂದ ತಮ್ಮ ನಾಡಿನ ಸಂಗತಿಗಳನ್ನ ಜಗದ ಸುದ್ದಿ
ಗಳನ್ನ ತಿಳಿದುಕೊಳ್ಳಲಿಕ್ಕೆ ಅವರು ಸಮರ್ಥರಿರ
ತಾರ. ಅದs ನಿಮಗs ನಾಡಿನ ಒತಟ್ಟಿಗೆ ಇರಲಿ;
ನೆರೆ ಹಳ್ಳಿ ಸುದ್ದಿಯೂ ತಿಳಿಯುವದಿಲ್ಲ.

ಕಾಮಣ್ಣಃ—ಇದ್ಯಾನ ನಮಗ ಆಗಾಣಿಲ್ಲ
ಬಿಡ್ರಿ. ಒಂದು ವ್ಯಾಳ್ಯಾ ನೀವು ಹೇಳಿದಂಗ ಕೇಳಿ
ಓದಲಾಕ ಕಲ್ತರೂ ನಮ್ಮ ಉದ್ಯೋಗ ಬಿಟಗೊಟ್ಟ
ವರತಮಾನ ಓದಕೊಂತ ಕೂತ್ರ ನಮ್ಮ ಹೊಟ್ಟಿ
ಹ್ಯಾಂಗ ತುಂಬಬೇಕರಿಯಪ್ಪ! ...

ರಾಮಣ್ಣಃ— ಕಾಮಣ್ಣs ಜಗತ್ತಿನೊಳಗ
ಉಳಿದ ಜನರಿಗೆ ಹೊಟ್ಟೆಯಿಲ್ಲಾ ಅಂತ ತಿಳಕೊಂಡಿ
ಯೇನ ಮತ್ತs!.... ನೀವು ಮಾಡುವಂಥ ಉದ್ಯೋಗ
ಒಕ್ಕಲತನಗಳನ್ನs, ಉಳಿದ ದೇಶದ ಜನರೂ ಮಾಡು
ತ್ತಾರೆ. ಅವರು ನಿಮಗಿಂತಲೂ ಹೆಚ್ಚು ದುಡಿಯು
ತ್ತಾರೆ. ಆದರೆ ಅವರು ಪ್ರತಿಯೊಂದು ಕೆಲ್ಸವನ್ನೂ
ಸುಧಾರಿಸಿದ ಪದ್ಧತಿಯಿಂದ ಮಾಡುತ್ತಾರೆ. ಇದರಿಂದ
ಅವರು ನಿಮಗಿಂತಲೂ ಹೆಚ್ಚು ಲಾಭವನ್ನು ಪಡೆದು
ಸುಖದಿಂದ ಇರುತ್ತಾರೆ ಕಾಮಣ್ಣ!....ರಶಿಯಾ
ದೊಳಗ ಕುರಿಗಳನ್ನ ಮೋಟಾರದೊಳಗ ತುಂಬ
ಕೊಂಡು ಮೇಯಿಸಲಿಕ್ಕೆ ಒಯ್ಯುತ್ತಾರೆ. ಅಡವೀ

ಯೊಳಗ ಕುರಿಗಳನ್ನು ಬಿಟ್ಟು ಕುರೀ ಕಾಯುವ ಮನಷ್ಯ, ಪುಸ್ತಕ ವರ್ತಮಾನಪತ್ರ ಓದತಿರತಾನ. ಅದರಂಗ ಪ್ರತಿಯೊಬ್ಬ ರೈತ ಕೂಲಿಕಾರನೂ, ತಮ್ಮ ತಮ್ಮ ಕೆಲ್ಸಕ್ಕೆ ಹೋಗುಕಾಲಕ್ಕ, ನೀವು ಹಂಗ ತಂಬಾಕು ಚಿಲಮಿ ಕಿಸೆಯೊಳಗ ಹಾಕಿಕೊಂಡ ಹೋಗತೀರಲ್ಲಾ; ಹಂಗ ಅಲ್ಲಿಯು ಜನರು ಕಿಸೆ ಯೊಳಗ ವರ್ತಮಾನ ಪತ್ರ ಹಾಕ್ಕೊಂಡು ಹೋಗ ತಿರತಾರ. ವಿಶ್ರಾಂತ್ರಿ ವ್ಯಾಳ್ಯಾದೊಳಗ ಅವುಗಳನ್ನ, ಓದಿ ನಾಡಿನ ಸುದ್ದಿ ತಿಳಕೊತಿರತಾರ. ಅಂದಮ್ಯಾಲೆ, ಓದಬೇಕು, ತಿಳಕೋಬೇಕು ಅನ್ನುವವರು ತಮ್ಮ ಕೆಲಸ ಬಿಟ್ಟು ಕೊಡಬೇಕಂತಿರೇನು ?

ಮಲ್ಲೇಶಪ್ಪ:— ಇದೇನ್ರಿ ? ಮಾಸ್ತರ .... ಹೊಸಾ ಸುದ್ದಿನ ಹೇಳಿದಿರೆಲ್ಲಾ ! ಮೋಟಾರ ದಾಗ ಕುಂತ ಕುರೀ ಕಾಯಲಿಕ್ಕೆ ಹೋಗತಾರ ಅಂತ. ಆ ಮ್ಯಾಲಿ ನಮ್ಮ ಕಾಮಣ್ಣಗೂ ಒಂದು ಕೊಡಿಸೇ ಬಿಡ್ರಿ. ಅಂದ್ರ, ಭಾಳ ಬೇಸಿ ಆಗತದ ನೋಡ್ರಿ. ಪಾ ಪಾ ಪಾ ಪಾ ಪ್! ಮಾಡಕೊಂತ ಓಡಲಿ ಮೋಟರ ತಗೊಂಡ....

ಭೀಮತೀ:—ಕುರೀ ಕಾಯಕೊಂಡ ಬರಲಿಕ್ಕೆ ಕಾಮಣ್ಣಗ ಒಂದು ಮೋಟರ ಸರಕಾರದವರು ಕೊಟ್ರೆ; ಊರ ಅರವೀ ಒಗೆಯುವ ನನಗೂ ಒಂದ ಬೇಕಲ್ಲ ಮಲ್ಲೇಶಪ್ಪ!....

ರಾಮಣ್ಣ:—ಇದೇನು ಭೀಮುತೀ! ಅವರಿಗೆ ಸರಕಾರದವರು ಮೋಟರು ಕೊಟ್ಟಾರಂತ ತಿಳ ಕೊಂಡಿಯೋನಮುತ್ತ! ಯಾವ ದೇಶದೊಳಗ ಯಾವ ಸರಕಾರನೂ, ಮೋಟರ ವಿಮಾನ ಕೊಟ್ಟ ನಡಸೋದು ಸಾಧ್ಯಯಿಲ್ಲ. ಆ ಆ ದೇಶದ ಜನರು. ತಮ್ಮ ಸುಖ ಸಮೃದ್ಧಿ ತಾವs ಮಾಡಿ ಕೊಳ್ಳತಾರ. ಸುಶಿಕ್ಷಿತ ನಾಗರಿಕರ ತಮ್ಮ ಹಿತ ಕೂಡೇ ಸಾಗಸತಿರತಾರ. ನಾಡನ್ನs ತಿಳಿಯದ ಅಜ್ಞಾನಿ ಜನರ ಕಡೆಯಿಂದ ನಾಡಿನ ಹಿತs ಹ್ಯಾಂಗ ಆಗಬೇಕು ?

ಮಲ್ಲೇಶಪ್ಪ:—ಕೇಳಿರೇನ್ರಿಪ್ಪಾss.... ಮಾಸ್ತರ ಮಾತನ್ನ, ನಮ್ಮಿಂದ ನಾಡಿಗೆ ಹಿತಾ ಆಗ ಬೇಕಾದರ ನಾಡ ಮುಂದ ಬರ ಬೇಕಾದರ ನಾಡೆಲ್ಲಾ ಕಲಿ ಬೇಕೂ ಅಂತ ಹೇಳಿದಂಗ ಆತು. ಇಷ್ಟ ದಿವಸ ಕಲೀಲಾರದ ಮಳ್ಳತನಕ ಬಿದ್ದು, ಬೆಳೆಯುವ ನಾಡಿನ ಕಾಲಾಗ ಮುಳ್ಳ ಆಗಿ ಮುರ ದೀವಿ. ಎಂಥಾ ನಮ್ಮ ಹುಚ್ಚತನ ಆತ್ರೆಪ್ಪಾs...... ..

ಭೀಮುತಿ:—ನಮ್ಮಂಥವರು ಈ ನಾಡಿನೊಳಗ ಹುಟ್ಟಿರೇ ಏನ ಸಾರ್ಥಕ ಆತ ಅಂತೀನಿ. ಭೂಮಿ ಮ್ಯಾಲಿ ಹುಲ್ಲ ಹುಟ್ಟಿದಂಗ ಹುಟ್ಟಿ ಬದಕೋದರೆ ಯಾತಕ್ಕ ?.... ತಿರುಗಿ ನಾಡಿನ ಕೀರ್ತಿಗೆ ಕಲಂಕ!....

ರಾಮಣ್ಣ:—ಜನತೆಯು ಅಜ್ಞಾನತನ ನಾಡಿನ ಕೀರ್ತಿಗೆ ಕಲಂಕ ತರತದ, ಅನ್ನುವ ಮಾತು

ಅಕ್ಷರಶಃ ನಿಜ ಅದ. ಈಹೊತ್ತು ಆದರೂ ಈ ಮಾತು ನಿಮ್ಮೆಲ್ಲರಿಗೆ ತಿಳಿಯಿತು; ಇದು ಒಳ್ಳೇ ಸಂತೋಷದ ವಿಷಯ. ನಾಡಿನ ಸೌಭಾಗ್ಯ. ಆಯಿತು. ಈಗ ವ್ಯಾಳ್ಯೆಯಾಗಿದೆ. ಮತ್ತೆ ನಾಳೆ ಬರುತ್ತೇನೆ. ನಮಸ್ಕಾರ.
(ರಾಮಣ್ಣ ಮಾಸ್ತರರಿಗೆ ಜನರೂ ಪ್ರತಿ ನಮಸ್ಕರಿಸುವರು)

## ಐದನೆಯ ದೃಶ್ಯ

## ವಿಶ್ವಕ್ಕಾಗಿ ಕಲಿ

(ದಿನದಂತೆಯೇ ಜನರಿಂದ ಗುಡಿ ತುಂಬಿದೆ. ಎಲ್ಲರೂ ಮಾಸ್ತರರು ಬರುವ ದಾರೀ ಕಾಯುತ್ತಿದ್ದಾರೆ. )

ಮಲ್ಲೇಶಪ್ಪಃ—ಸಾಲೀ ಕಲಿಯೋದು ಅಂತೂ ಘಟ್ಟಿ ಆದಂಗ ಆತು. ಆದರ, ಈ ವಯಾದಾಗ ನಮ್ಮಂಥವರ ಕೈ ಕಣ್ಣು, ಏನ ಕೆಲಸಾ ಮಾಡತಾವೋ? ಇಲ್ಲೋ ಯಾರಿಗೆ ಗೊತ್ತs....ಭೀಮತೀ?....

ಭೀಮತಿ:— ನೀ ಕಲ್ತು ಶ್ಯಾಣ್ಯಾ ಆಗಿ ಪುಸ್ತಕ-ಗಿಸ್ತಕ ಬರೀಬೇಕು. ಅಂತೀಯೇನ ಮತ್ತ?.... ಏನೋ ಮುಪ್ಪಿನ ವಯಾದಾಗ ದೇವರ-ಧರ್ಮದ ವಿಷಯಕ್ಕ ಎರಡು ಸಾಲು ಓದಲಿಕ್ಕೆ ಬಂದರ ಸಾಕಲ್ಲ!....
(ಅಷ್ಟರಲ್ಲಿ ರಾಮಣ್ಣ ಮಾಸ್ತರರ ಪ್ರವೇಶ. ಎಲ್ಲರೂ ಆದರದಿಂದ ಸ್ವಾಗತಿಸುವರು.)

ರಾಮಣ್ಣ:—ಏನು ಭೀಮತೀ ?....ಧರ್ಮದ ವಿಷ ಯಕ್ಕ ಏನೋ ಚರ್ಚಾ ನಡದಂಗ ಕಾಣಸ್ತದಲ್ಲ!...

ಮಲ್ಲೇಶಪ್ಪ:—ಭೀಮತಿ ಅಂತಾನ್ರಿ ಮಾಸ್ತರ! ಈ ವಯಾದಾಗ ಕಲ್ತ ನಾವು ಉಳದ ಯಾವ ಉಸಾಬರಿಗೆ ಹೋಗದಿದ್ದರೂ, ನಮ್ಮ-ನಮ್ಮ ಧರ್ಮದ ಪುಸ್ತಕ-ಪುರಾಣರೇ ಓದಲಿಕ್ಕೆ ಬಂದರ, ಸಾಕು ಅಂತ್ರಿ.

ರಾಮಣ್ಣ:—ಮಲ್ಲೇಶಪ್ಪ! ನಿಜ ಹೇಳಬೇಕಾದರ – ಇಲ್ಲಿ ಕೇಳು ನಾವೇನು ಧರ್ಮ; ಧರ್ಮ ಅಂತೇವಲ್ಲ ಇದು ನಿಜವಾದ ಧರ್ಮಲ್ಲ. ಧರ್ಮ ಅಂಬೂದು ಬ್ಯಾರೇನs ಅದ. ಅದನ್ನ ಹೇಳುವ ಸಲುವಾಗಿ ಇಂದು ನಾನೊಂದು ಪುಸ್ತಕ ತಂದೀನಿ. ಇದರೊಳಗ ಮಹಾವೀರ ಅನ್ನುವಂಥ ಮಹಾಪುರುಷ ಧರ್ಮ ಅಂದ್ರ ಏನು ? ಅಂಬೂದನ್ನ ಜಗತ್ತಿಗೆ ಹೇಳಿ ಹೋಗ್ಯಾನ ಅದನ್ನ ನಿಮಗ ತಿಳಯುವ ಹಂಗ ಓದ ತೇನ ಕೇಳ್ರಿ. "ಧರ್ಮವೆಂಬುವದು ಕೇಳುವ ವಿಷಯವಲ್ಲ. ಆಚರಿಸುವ ಮಾರ್ಗ ವಾಗಿದೆ. ಅದರಿಂದ ಜಗತ್ತಿನೊಳಗಿನ ಎಲ್ಲಾ ಜೀವಿಗಳೊಡನೆ ದಯಾಭಾವದಿಂದ ವರ್ತಿಸಿರಿ, ದಯವೇ ಧರ್ಮದ ಮೂಲ. ಅಹಿಂಸೆಯೇ ಪರಮ ಧರ್ಮ. ಇದು ಉಪದೇಶಿಸುವ ಸಂಗತಿಯಲ್ಲ; ನಡೆಯುವ ಸಂಗತಿಯು."

ಹೀಂಗ್ಸ ಆ ಮಹಾಪುರುಷ ಜಗಕ್ಕ ಧರ್ಮ ಅಂದ್ರ ಏನು ? ನಮಗೂ ಅದಕ್ಕೂ ಯಾವ ಸಂಬಂಧ ಅದ? ಅಂಬೂ ಮಾತನ್ನ ಸಂಕ್ಷಿಪ್ತ ರೂಪವಾಗಿ, ಎರಡೂವರಿ ಸಾವಿರ ವರ್ಷ ಹಿಂದ್ಸ ಹೇಳಿದ್ದಾನೆ. ಇದೇ ರೀತಿ, ಬುದ್ಧ, ಮಹಮ್ಮದ ಪೈಂಗಬರ, ಕ್ರಿಸ್ತ ಮೊದಲಾದ ಮಹಾಪುರುಷರೂ, ಇದನ್ನೇ ಹೇಳಿದ್ದಾರೆ. ಅಷ್ಟ ಯಾಕ್ಸ ಮೊನ್ನಿನ ನಮ್ಮ ಮಹಾತ್ಮಾ ಗಾಂಧೀಯುವರೂ ಇದನ್ನೇ ಹೇಳಿದ್ದಾರಲ್ಲ. “ ಅಹಿಂಸೆಯಿಂದನ್ಸ, ಜಗತ್ತಿನ ಸುಖ, ಶಾಂತಿ. ವಿಶ್ವಬಂಧುತ್ವನ್ಸ ನಿಜವಾದ ಧರ್ಮ. ” ಅಂತ.

ಮಲ್ಲೇಶಪ್ಪಃ—ಮಾಸ್ತರ ಮೊದಲ, ಮೊದಲ ಏನ ಹೇಳ್ರಿ; ಅದ ಏನೋ ಆಟಾ, ಈಟಾ ತಿಳಿದಂಗ ಆತು. ಆದರ ಕಡೀಕ ಏನೋ ಅಂದ್ರಿ ಅಲ್ಲಾs ‘ಇ ತಿ ಬಂಧೂನ ಧರನು’ ಅಂತ ಅದೇನೋ ಹೊಳಿಲಿಲ್ರಿ.

ಭೀಮುತಿಃ—ಹೌದರಿ. ನನಗೂ ಅದೇ ತಿಳಿಲಿಲ್ಲ ನೋಡ್ರಿ.

ರಾಮಣ್ಣಃ-ಅದೇನು ತಿಳಿಲಿಲ್ಲಾs ಅಂತೀರ್ಯಾ?... ವಿಶ್ವ ಅಂದರೆ ಜಗತ್ತು. ಬಂಧುತ್ವ ಅಂದರೆ ಅಣ್ಣ ತಮ್ಮಂದಿರು ಅನ್ನುವಂಥ ಭಾವನೆ. ಈ ಜಗತ್ತಿನೊಳಗ ಇರುವ ನಾವೆಲ್ಲರೂ ಅಣ್ಣ-ತಮ್ಮಂದಿರು ಅನ್ನುವಂಥ ತಿಳುವಳಿಕೆ ನಮ್ಮ ಪ್ರತಿಯೊಬ್ಬರ

ಮನಸ್ಸಿನೊಳಗೂ ಬರಬೇಕು. ಇದು ನಿಜವಾದ ಮಾನವ ಧರ್ಮ, ಅಂತ ಮಹಾತ್ಮರು ಹೇಳಿದ್ದಾರೆ.

ಮಲ್ಲೇಶಪ್ಪ:—ಇದನ್ಯಾಕ ಹೇಳತಾರ್ರಿ ಒಂದು ಹೊಟ್ಟೀಲೇ ಹುಟ್ಟಿದವರು, ಬೆನ್ನಿಗೆ ಬೆನ್ನ ಹಚ್ಚಿ ಬಂದವರು, ಒಬ್ಬರಿಗೊಬ್ಬರು ಬಡದ್ಯಾಡತಿರತಾರರಿ. ಅಂದ ಮ್ಯಾಲಿ ಜಗದ ಜನ, ಅಣ್ಣ-ತಮ್ಮಂದಿರ ಹಂಗ ನಡದೀತರ್ಯಾ ?

ಕಾಮಣ್ಣ:—ಜಗದ ಜಂಜಾಟ ನಮಗ ಯಾತಕ್ಕ ಬೇಕ್ರಿ? ನಮ್ಮ ಅಷ್ಟಕ ನಾವು ಸುಖ ರೂಪ ಇದ್ರ ಆತು.....

ರಾಮಣ್ಣ:—ಕಾಮಣ್ಣ! ... ಮನುಷ್ಯರಾದ ನಾವು ಹೀಗೆ ತಿಳಿದುಕೊಳ್ಳುವದು ಪೂರ್ಣ ತಪ್ಪು. ತಮ್ಮ ತಾವೇ ಹೊಟ್ಟೆ ತುಂಬಿಕೊಳ್ಳುವದು; ತಮ್ಮ ತಾವೇ ಸುಖದಿಂದ ಇರುವದು; ಇದು ಪಶುಪ್ರವೃತ್ತಿ. ಯಾವ ಜಗತ್ತಿನಲ್ಲಿ ನಾವು ಮನುಷ್ಯರಾಗಿ ಹುಟ್ಟಿ ಬಂದಿರುವೆವೋ ಆ ಜಗತ್ತಿಗೂ ನಮಗೂ ನಿಕಟ ಸಂಬಂಧ ಅದ. ಅಂಬೂದನ್ನ ನಾವು ತಿಳಕೊಂಡ ನಡೀ ಬೇಕ ಆಗಿದೆ. ಒಂದು ವ್ಯಾಳ್ಯಾ ನಾವು ನಮ್ಮ ಜಗತ್ತನ್ನ ತಿಳಿಕೊಳ್ಳದ ಅಜ್ಞಾನದಿಂದ ನಡೆ ದರ ಅದರ ಪರಿಣಾಮ ಜಗತ್ತಿನ ಮ್ಯಾಲಿ ಆಗದ ನಿಲ್ಲಲಾರದು.

ಭೀಮತಿ :—' ಊರ ಸುಟ್ಟರೂ ಹಣಮಂತ ದೇವರ ಗುಡಿ ಹೊರಗ ಅನ್ನುಹಂಗ ಜಗದ ಮ್ಯಾಲಿ ಯಾವ ಪರಿಣಾಮ ಆದರೂ ನಮ್ಮದೇನ ಹೋಗ ತದರಿ ?

ರಾಮಣ್ಣ :—ಮಲ್ಲೇಶಪ್ಪ! ಇಂದಿನ ಯುಗ ದೊಳಗ ವಿಶ್ವನ್ನ, ಒಂದು ಕುಟುಂಬ ಅಂತ ಆಗ್ಯದ. ಆ ಕುಟುಂಬದೊಳಗ ಇರುವಂಥ ಜನಾ ನಾವೆಲ್ಲ ಅಂದ ಮ್ಯಾಲಿ ನಮ್ಮ ಕುಟುಂಬದ ಬಗ್ಗೆ, ನಮಗ ಅರವು ಇರಬೇಕ ಅಂತಿರ್‍ಯೋ? ಬೇಡ ಅಂತಿರ್‍ಯೋ? ಈಗ ಎಷ್ಟೋ ಸಂಘ—ಸಂಸ್ಥೆಗಳು ವಿಶ್ವನ ಒಂದು ಕುಟುಂಬ; ಮಾನವ ಕುಲನ್ನ ಒಂದು ಮನೆತನ; ಅನ್ನೊ ದೃಷ್ಟಿಲೇ ಕಾರ್ಯ ಮಾಡತಾ ಅವ.

ಮಲ್ಲೇಶಪ್ಪ :—ಇವೆಲ್ಲ ಮಾತು, ದೊಡ್ಡ ದೊಡ್ಡ ಮಂದಿಗೆ ಸಂಬಂಧರೀ ಮಾಸ್ತರ!....ನಮ್ಮಂಥವರಿಗೆ ಜಗದ ಸಂಘ-ಪಂಗಡ ವಿಚ್ಯಾರ ಯಾತಕ್ಕ ಬೇಕ್ರಿ?....

ರಾಮಣ್ಣ :—ಈಗ ಹೇಳಿದ ಮಾತು ಮರತೆ ಯೇನು ಮಲ್ಲೇಶಪ್ಪ! ಪ್ರತಿಯೊಬ್ಬ ಮನುಷ್ಯಗೂ, ಜಗತ್ತಿಗೂ ಸಂಬಂಧ ಅದ, ಆದರ ಈ ಮಾತನ್ನ ತಿಳಕೊಳ್ಳಬೇಕಾದರ ತಿಳವಳಿಕೆ ಬೇಕಾಗತದ. ಎಲ್ಲಿಯತನಕ ಜನತೆಯೊಳಗ ಅಜ್ಞಾನದ ಕತ್ತಲೆ ಮುಸಕಿರತದನೋ, ಅಲ್ಲಿಯ ತನಕ ಜಗದ ಅರವು ಆಗಲಿಕ್ಕೆ ಸಾಧ್ಯಯಿಲ್ಲ. ಅದಕ್ಕ ಜಗತ್ತಿನೊಳಗಿನ

ಎಲ್ಲ ಜನರಿಗೂ ಶಿಕ್ಷಣ ಸಿಗಬೇಕು ಅಂತ ತಿಳಿದು ಜಗತ್ತಿನ ಎಲ್ಲಾ ದೇಶದವರೂ ಕೂಡಿ ಒಂದು ಸಂಘ ಸ್ಥಾಪಿಸಿ ಮಾಡಿದ್ದಾರೆ. ಪ್ರತಿಯೊಬ್ಬ ಮನುಷ್ಯನೂ ಸುಶಿಕ್ಷಿತ ಆಗಬೇಕು ಅಂಬುದೇ ಅವರ ಮುಖ್ಯ ಉದ್ದೇಶವಾಗಿದೆ.

ಮಲ್ಲೇಶಪ್ಪ:—ಕೇಳಿದಿರ್ಯಾನಪಾ ! ನೀವೆಲ್ಲರೂ, ಕಲಿಲಾರದ ನಮುಂಥವರು ಈ ಭೂಮಿಗೇ ಭಾರ ಆಗೇವಿ ಕಣ್ಣಿದ್ದ,—ಕುರುಡರಾಗೇವಿ. ಬಾಯಿದ್ದು ಮೂಕರಾಗೇವಿ. ವ್ಯರ್ಥ ಆತು ನಮ್ಮ ಜನ್ಮ!....

ಭೀಮಶೀ:—ಆದದ್ದು ನೆನೆದು ಅತ್ತಕೊಂತ ಕೂತ್ರ, ಆಗೊದೇನು ? ಮಲ್ಲೇಶಪ್ಪ !....ಇನ್ನ ಮುಂದ ನಮ್ಮ ಸಾರ್ಥಕ ಆಗ ಬೇಕಾದರ, ಏನು ಮಾಡಬೇಕು ? ಅಂತ ಸೆರಗೊಡ್ಡಿ ಬೇಡಕೋರಿ.

ಕಾಮಣ್ಣ:—ಪರತಕ್ಷ ಬೀರಪ್ಪನ್ಯ ಬಂದು, ನಮ್ಮ ಕಣ್ಣ ತೆರದಂಗ ಆತು. ಇಷ್ಟು ದಿವಸ ನಾವೆಲ್ಲ ಜನ ಒಂದು ದನದ ಸಮ ಇದ್ದ್ಯಾರಿಯಪ್ಪ್ಯ ನಮುಗ ಬುದ್ಧಿ ಮಾತ ಹೇಳಿ, ಉದ್ಧಾರ ಮಾಡಿದಿರಿ. ಇನ್ನ ಮುಂದ ನೀವ ಹೇಳಿದಂಗ ಕೇಳತೇವ ಅಂತ ಇದ್ಯ ಗುಡಿಯೊಳಗ ಆಣೆ ಮಾಡ ತೀವ್ರಯಪ್ಪ ! ಯಾಕ್ರೆ ಪಾ; ಎಲ್ಲಾ ದೈವಕ ಒಪ್ಪಿಗಿ ಐತ್ಯೋ ಇಲ್ಲೋ?....

ಎಲ್ಲರೂಃ—ಹೇಳಿದಂಗ ಕೇಳತೀವಿ; ಓದು ಬರಹ ಕಲೀತೀವಿ.

ರಾಮಣ್ಣಃ—ಬಹಳ ಸಂತೋಷ. ನಿಮ್ಮ ಪ್ರತಿಜ್ಞೆಯನ್ನು ಕೇಳಿ ನನ್ನ ಜೀವನವೂ ಸಾರ್ಥಕ ವಾಯಿತು. ಓದು ಕಲಿಯಿರಿ ಕಲಿತು ನಿಮ್ಮ ಬಾಳ್ವೆ ಯನ್ನು ಬೆಳಗಿಸಿಕೊಳ್ಳಿರಿ. ಅದಕ್ಕಾಗಿಯೇ ಕವಿ ಸರ್ವಜ್ಞನು ಹೇಳಿದ್ದಾನೆ. ' ಜ್ಞಾನವುಳ್ಳವನ ಒಡಲು ಭಾನುವಿನ ತೆರನಿಹುದು ' ಈ ಪ್ರಕಾರ ನೀವು ಜ್ಞಾನ ದೀವಿಗೆಯಿಂದ ಅಜ್ಞಾನದ ಕತ್ತಲೆಯನ್ನು ಹೊಡೆ ದೋಡಿಸಿರಿ. ಕಲಿಯಿರಿ; ಕಲಿತು ಬಾಳಿರಿ. ಇದಕ್ಕಾಗಿ ನಮ್ಮ ಸರಕಾರದವರು ಯಾವತ್ತೂ, ಸಹಾಯವನ್ನು ಸಲ್ಲಿಸಲಿಕ್ಕೆ ಸದಾ ಸಿದ್ಧರಿದ್ದಾರೆ. ಶುಭಸ್ಯ ಶೀಘ್ರಂ ಅಂದಂತೆ ನಾಳಿನ ಶುಭ ಮುಹೂರ್ತದಲ್ಲಿಯೇ ಸಮಾಜ ಶಿಕ್ಷಣ ವರ್ಗವನ್ನು ಆರಂಭಿಸೋಣ.

ಎಲ್ಲರೂ:—ಎಲ್ಲರೂ ಕಲಿಯೋಣ; ಕಲಿತೇ ಬದುಕೋಣ!

( ಮುಗಿದುದು )

**ಕರ್ನಾಟಕ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿಯವರ**

# ಪ್ರಕಟನೆಗಳು.

೧ ಆತ್ಮೋದ್ಧಾರ
೨ ಗ್ರಾಮೋದ್ಧಾರ ಪದಗಳು
೩ ಲಾವಣಿ ಪದಗಳ ಸಂಗ್ರಹ
೪ ಪೌರನೀತಿಯ ' ಅ ಆ '
೫ ಹಿರಿಮೆಯ ಮಂತ್ರ ಅರ್ಥಾತ್ ಸ್ವಚ್ಛತೆ
೬ ಶಿಶು ಸಂಗೋಪನ ಹಾಗೂ ಪ್ರಥಮ ಚಿಕಿತ್ಸೆ
೭ ಅಂದಚಂದ
೮ ಬಸವಣ್ಣನವರು
೯ ಅಕ್ಕಮಹಾದೇವಿ
೧೦ ಬ್ಯಾಂಕುಗಳ ಉಪಯೋಗ
೧೧ ಮಾತನಾಡುವ ದೇವರು
೧೨ ಮಾಪರಿಯ ಮಲ್ಲಣ್ಣ
೧೩ ಮರಳಿ ಹಳ್ಳಿಗೆ
೧೪ ಅಕ್ಕ ತಂಗಿಯರಿಗೆ
೧೫ ಹರಿಜನೋದ್ಧಾರ
೧೬ ಯುಗಪುರುಷ ಗಾಂಧೀಜಿ
೧೭ ಬಾಳಿನ ಬೆಳಕು
೧೮ ವಯಸ್ಕರ ಪದ್ಯಾವಲಿ
೧೯ ಭಗವಾನ್ ಮಹಾವೀರ
೨೦ ಕರ್ನಾಟಕದ ಕಥೆಗಳು
೨೧ ಸತ್ಯನಿಧಿ ಹರಿಶ್ಚಂದ್ರ
೨೨ ಜನಪ್ರಿಯ ರಾಮಾಯಣ
೨೩ ಮಹಮ್ಮದ ಪೈಗಂಬರ
೨೪ ಕಲ್ಪ ವೃಕ್ಷ
೨೫ ಕಲಿಯೋದ್ಯಾಕೆ ?

—೦—